# ಅಧ್ಯಾತ್ಮಪ್ರಕಾಶ

ಸಂಸ್ಥಾಪಕರು : ಪ.ಪ. ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು

'एतज्ज्ञेयं नित्यमेवात्मसंस्थं नातःपरं वेदितव्यं हि किञ्चित्'

ಸಂಪುಟ ೬೦ ನವೆಂಬರ್ ೧೯೯೦ ಸಂಚಿಕೆ ೩

ವಿಷಯಗಳು



ಹೊಸವರ್ಷಕ್ಕೆ
ಪತ್ರಿಕೆಯ ಚಂದಾ
ರೂ. ೨೫-೦೦

ಪೋಷಕರಿಗೆ ರೂ. ೫೧-೦೦
ಮಹಾಪೋಷಕರಿಗೆ ರೂ. ೨೦೧-೦೦
ವಿದೇಶಗಳಿಗೆ– ೭೫ ಡಾಲರ್‌ಗಳು




ಹೊಸ ಚಂದಾದಾರರನ್ನು
ಕೂಡಿಸಿಕೊಡಿರಿ.

ಪತ್ರಿಕೆಯ ಸಂಪಾದಕ ಮತ್ತು ಪ್ರಕಾಶಕ :
ಅಧ್ಯಾತ್ಮವಿದ್ಯಾಪ್ರವೀಣ ಹೆಚ್.ಎಸ್. ಲಕ್ಷ್ಮೀನರಸಿಂಹಮೂರ್ತಿ,
ಅಧ್ಯಾತ್ಮಪ್ರಕಾಶಕಾರ್ಯಾಲಯ, ಹೊಳೆನರಸೀಪುರ–573211
November-1990

# ಕಾರ್ಯಾಲಯದ ಸುದ್ದಿ

**ಪತ್ರಿಕೆ :** ಹಳೆಯ ಮಹಾಪೋಷಕರುಗಳಲ್ಲಿ ಅರ್ಧಕ್ಕಿಂತ ಹೆಚ್ಚು ಜನರು ಹೆಚ್ಚುವರಿ ಮಹಾಪೋಷಣದ್ರವ್ಯವನ್ನು ನೀಡಿ ಪ್ರೋತ್ಸಾಹಿಸಿದ್ದಾರೆ. ಉಳಿದವರಿಗೆ ವೈಯಕ್ತಿಕವಾಗಿ ಈಚೆಗೆ ಒಂದು ಪ್ರಾರ್ಥನಾಪತ್ರವನ್ನು ಕಳುಹಿಸಲಾಗಿದೆ. ಕೆಲವರು ಹೆಚ್ಚುವರಿ ಮಾಡಿದ ಮಹಾಪೋಷಣದ್ರವ್ಯವನ್ನು ಹಳಬರು ಸಲ್ಲಿಸಬೇಕಾಗಿಲ್ಲವೆಂದೂ ಅಜೀವಸದಸ್ಯರಿಗೆ ಅವರ ಜೀವಿತಕಾಲದವರೆಗೆ ಪತ್ರಿಕೆ ರವಾನಿಸುವದು ಸಂಸ್ಥೆಯ ಜವಾಬ್ದಾರಿಯೆಂದೂ ತಿಳಿಸಿದ್ದಾರೆ. ಇದು ಸರಿಯೆ. ಆದರೆ ನಾವು ಹೆಚ್ಚುವರಿ ಹಣಕ್ಕಾಗಿ ಉದಾರಮನಸ್ಸಿನಿಂದ ಸಹಾಯಮಾಡುವಂತೆ ಆಗಾಗ್ಗೆ ಪ್ರಾರ್ಥಿಸಿದ್ದೇನೆಯೇ ಹೊರತು ಕಡ್ಡಾಯಮಾಡಿಲ್ಲ. ಪತ್ರಿಕೆಯ ಬದುಕು ಸ್ಥಿರವಾಗಿದ್ದಲ್ಲಿ ಮಾತ್ರ ಅಜೀವಸದಸ್ಯರ ಉದ್ದೇಶವು ನೆರವೇರುತ್ತದೆ. ಅದಕ್ಕಾಗಿ ಈ ಸಂಕಷ್ಟಪರಿಸ್ಥಿತಿಯಲ್ಲಿ ಹೆಚ್ಚಿನ ಹಣವನ್ನು ಬೇಡಬೇಕಾಯಿತು. ಇನ್ನು ಹಳೆಯ ಮಹಾಪೋಷಕರು ನಾವು ಕಳುಹಿಸುತ್ತಿರುವ ಪತ್ರಿಕೆ ತಲುಪುತ್ತಿದೆಯೆ? ಅದು ಬೇಕೆ? ಬೇಡವೆ? ಎಂಬ ವಿಷಯಕ್ಕಾದರೂ ಒಂದು ಪತ್ರವನ್ನು ದಯಮಾಡಿ ಬರೆಯಲೇಬೇಕಾಗಿ ಕಡ್ಡಾಯವಾಗಿ ಪ್ರಾರ್ಥಿಸಿದ್ದೇವೆ. ಹೆಚ್ಚಿನ ಹಣವನ್ನು ಕಳುಹಿಸುವದರ ಔಚಿತ್ಯವನ್ನು ಅವರವರಿಗೇ ಬಿಡಲಾಗಿದೆ. ಯಾವ ಉತ್ತರವೂ ಬಾರದಿದ್ದರೆ 1991ನೇ ಸೆಪ್ಟೆಂಬರ್‌ನಿಂದ ಸಂಚಿಕೆ ರವಾನೆಯನ್ನು ನಿಲ್ಲಿಸಲಾಗುವದು.

**ಗ್ರಂಥಪ್ರಕಟನೆ :** (೧) 'ಶಾಂಕರವೇದಾಂತಸೌರಭ' ಗ್ರಂಥದ ಮುದ್ರಣವು ಪೂರೈಸಿದೆ. ಬೈಂಡಿಂಗ್ ವ್ಯವಸ್ಥೆಮಾಡುತ್ತಿದೆ. ಬೆಂಗಳೂರಿನಿಂದ ಫೋಟೋಗಳು, ಜಾಕೆಟ್-ಇವು ಸಿದ್ಧವಾಗಿ ಬರಬೇಕಾಗಿದೆ. ಅನಂತರವೇ ಗ್ರಂಥವು ಪ್ರಕಟನೆಗೆ ಸಿದ್ಧವಾಗುತ್ತದೆ. ಆದಷ್ಟು ಜಾಗ್ರತೆಯಾಗಿ ಗ್ರಂಥವನ್ನು ವಾಚಕರಿಗೆ ಒದಗಿಸಲಾಗುವದು. (೨) 'ಅಧ್ಯಾತ್ಮಶಾಸ್ತ್ರಪರಿಭಾಷೆ' ಎಂಬ ಪುಟ್ಟಗ್ರಂಥವು ಮುದ್ರಣವಾಗುತ್ತಿದೆ. ಹಿಂದೆ ತಿಳಿಸಿದ್ದಂತೆ ಇನ್ನುಳಿದ ಮೂರು ಚಿಕ್ಕಗ್ರಂಥಗಳು ಸಹ ಬೈಂಡಾಗುತ್ತಿವೆ. ಹೆಚ್ಚಿನ ವಿವರವನ್ನು ಮುಂದೆ ತಿಳಿಸಲಾಗುವದು.

**ಸಂಪಾದಕರು :** ಶಿವಮೊಗ್ಗದಲ್ಲಿ ನಡೆದ ವೇದಾಂತಸಪ್ತಾಹದಲ್ಲಿ ಭಾಗವಹಿಸಿ ಐದು ಪ್ರವಚನಗಳನ್ನು ನೀಡಿದರು. 29-10-90 ರಿಂದ ಮೈಸೂರಿನಲ್ಲಿ ಒಂದು ವಾರಕಾಲ ವೇದಾಂತೋಪನ್ಯಾಸಗಳನ್ನು ನೆರವೇರಿಸಲಿದ್ದಾರೆ. ನವೆಂಬರ್ ಮಾಹೆಯಲ್ಲಿ ಸ್ಥಳದಲ್ಲಿರುತ್ತಾರೆ. ಅವರ ಮಗನ ವಿವಾಹವು 6-12-90 ರಂದು ಮೈಸೂರಿನಲ್ಲಿ ಏರ್ಪಾಡಾಗಿದೆ. ಆದ್ದರಿಂದ ಹದಿನೈದು ದಿನಗಳಕಾಲ ಅವರು ತಮ್ಮ ಸ್ವಂತ ಕೆಲಸಗಳಲ್ಲಿ ತೊಡಗಿರುತ್ತಾರಾದ್ದರಿಂದ ಪತ್ರವ್ಯವಹಾರಗಳಲ್ಲಿ ವಿಳಂಬವಾಗಲಿದೆ. ಮಹಾಜನರು ಸಹಕರಿಸಬೇಕಾಗಿ ಬೇಡಿದೆ.

**ಅನುಷ್ಠಾನ :** 28-11-90 ರಿಂದ ಮೂರು ದಿನಗಳಕಾಲ ಕಾರ್ಯಾಲಯದಲ್ಲಿ ಗೀತಾಜಯಂತೀ ಪ್ರಯುಕ್ತ ಸಂಜೆ 4-30 ರಿಂದ ಉಪನ್ಯಾಸಗಳೂ 1-12-90 ರಂದು ಮಂಗಳವೂ ನೆರವೇರುವವು.

———

# ಅಧ್ಯಾತ್ಮ ಪ್ರಕಾಶ



ಸಂಪುಟ ೬೦]    ವರ್ಷಕ್ಕೆ ರೂ. ೨೫-೦೦ ; ಬಿಡಿ ಸಂಚಿಕೆ : ರೂ. ೨-೫೦    [ಸಂಚಿಕೆ ೩

ನವೆಂಬರ್-1990

(ಶ್ರೀ ಪ್ರಮೋದಸಂವತ್ಸರದ ಕಾರ್ತಿಕ)

## ಪರಮಶಾಂತಿಗೆ ಉಪಾಯ

ಓಂ ॥ ಸೂಕ್ಷ್ಮಾತಿಸೂಕ್ಷ್ಮಂ ಕಲಿಲಸ್ಯ ಮಧ್ಯೇ
ವಿಶ್ವಸ್ಯ ಸ್ರಷ್ಟಾರಮನೇಕರೂಪಮ್ ।
ವಿಶ್ವಸ್ಯೈಕಂ ಪರಿವೇಷ್ಟಿತಾರಂ
ಜ್ಞಾತ್ವಾ ದೇವಂ ಶಾಂತಿಮತ್ಯಂತಮೇತಿ ॥

—ಶ್ವೇತಾಶ್ವತರೋಪನಿಷತ್ತು ೪-೧೪

**ಭಾವಾರ್ಥ :**- ಅವಿದ್ಯೆ ಹಾಗೂ ಅದರ ಕಾರ್ಯಗಳ ನಡುವೆ ಅತಿ ಸೂಕ್ಷ್ಮವಾಗಿದ್ದುಕೊಂಡಿರುವ, ಜಗತ್ತಿನ ಸೃಷ್ಟಿಕರ್ತನಾದ, ಅನೇಕರೂಪನಾದ, ಜಗತ್ತನ್ನೆಲ್ಲ ಸುತ್ತುವರೆದಿರುವ ಒಬ್ಬನೇ ಆದ ದೇವನನ್ನು ಅರಿತವನು ಅತ್ಯಂತವಾದ ಶಾಂತಿಯನ್ನು ಹೊಂದುವನು.

[ಪರಮಾತ್ಮನನ್ನರಿತವನು ನಿತ್ಯಶಾಂತಿಯನ್ನು ಪಡೆಯುವನು. ಆ ಭಗವಂತನಾದರೊ, ಪ್ರಪಂಚವನ್ನೆಲ್ಲ ಉಂಟುಮಾಡಿ ಅನೇಕರೂಪಗಳಿಂದ ಕಾಣಿಸಿಕೊಳ್ಳುವವನಾಗಿ ಜಗತ್ತನ್ನೆಲ್ಲ ವ್ಯಾಪಿಸಿರುವನು. ಅವನನ್ನು ತಿಳಿಯುವದೇ ಪರಮಶಾಂತಿಗೆ ಸಾಧನವು-ಎಂದಭಿಪ್ರಾಯ.]

———

# ಅಧ್ಯಾತ್ಮಸಂದೇಶ

( ಗುರುಕಿಂಕರ )

## ಶಾಂತಿಸಾಧನ

ಶ್ವೇತಾಶ್ವತರೋಪನಿಷತ್ತಿನ ೪-೧೪ನೆಯ ಮಂತ್ರವನ್ನು ವ್ಯಾಖ್ಯಾನಮಾಡುವ ಮುಂಚೆ ೪-೧೩ನೆಯ ಮಂತ್ರವನ್ನು ವಿವರಿಸಬೇಕಾಗಿದೆ. ಅದು ಹೀಗಿದೆ :

ಓಂ ॥ ಯೋ ದೇವಾನಾಮಧಿಪೋ ಯಸ್ಮಿನ್ ಲೋಕಾ ಅಧಿಶ್ರಿತಾಃ ।
ಯ ಈಶೇ ಅಸ್ಯ ದ್ವಿಪದಶ್ಚತುಷ್ಪದಃ
ಕಸ್ಮೈ ದೇವಾಯ ಹವಿಷಾ ವಿಧೇಮ ॥

ಈ ಮಂತ್ರದಲ್ಲಿ "ಯಾವ ದೇವನಿಗೆ ನಾವು ಹವಿಸ್ಸನ್ನು ಅರ್ಪಿಸಿ ಆರಾಧಿಸೋಣ ?" ಎಂಬ ವಾಕ್ಯವಿದೆ. ಋಗ್ವೇದದಲ್ಲಿ ಇದೇ ಪಲ್ಲವಿಯನ್ನುಳ್ಳ ಇನ್ನೂ ಕೆಲವು ಋಕ್ಕುಗಳಿವೆ. ಯಾವ ದೇವನಿಗೆ ನಾವು ಹವಿರರ್ಪಣೆಯನ್ನು ಮಾಡಬೇಕಾಗಿದೆಯೋ ಆ ದೇವನನ್ನು ಕೆಲವು ವಿಶೇಷಣಗಳಿಂದ ಸ್ತುತಿಸಲಾಗಿದೆ. ಈ ಸ್ತುತಿಗಳು ಪರಮಾತ್ಮನಿಗೇ ಮುಖ್ಯಾರ್ಥದಲ್ಲಿ ಹೊಂದುತ್ತವೆ. ಪ್ರಕೃತ ಆ ದೇವನು ದೇವತೆಗಳಿಗೆಲ್ಲ ಒಡೆಯನಾಗಿರುತ್ತಾನೆ. ಆದ್ದರಿಂದ ಅವನನ್ನು ದೇವದೇವನೆಂದೂ ಮಹಾದೇವನೆಂದೂ ಪರಮೇಶ್ವರನೆಂದೂ ಕರೆಯುವರು. ಅವನ ಒಡೆತನವೆಂದರೆ ರಾಜನು ಪ್ರಜೆಗಳನ್ನು ಆಳುವಂತೆ ಅಲ್ಲ. ಒಬ್ಬ ತಾಯಿಯು ತನ್ನ ಮಗುವಿಗೆ ಒಡೆಯಳೆಂದರೆ ಹೇಗೋ ಹಾಗೆ ತಿಳಿಯಬೇಕು. ಮಗುವಿನ ಶರೀರವು ತಾಯಿಯ ಹೊಟ್ಟೆಯಲ್ಲೇ ಬೆಳೆದು ಹೊರಬಂದಿರುತ್ತದೆ. ಅನಂತರವೂ ತಾಯಿಯೇ ಹಾಲುಣಿಸುತ್ತಾಳೆ. ಅದರ ಎಲ್ಲಾ ಯೋಗಕ್ಷೇಮವನ್ನೂ ಅವಳೇ ನಿರ್ವಹಿಸುತ್ತಾಳೆ. ಹಾಗೆಯೇ ಭಗವಂತನೂ ಎಲ್ಲಾ ದೇವತೆಗಳ, ಎಲ್ಲಾ ಮನುಷ್ಯರ, ಎಲ್ಲಾ ಪ್ರಾಣಿಗಳ ಒಡೆಯನಾಗಿರುತ್ತಾನೆ. ಇನ್ನು ಬ್ರಹ್ಮಾಂಡಕ್ಕೆ ಒಳಪಟ್ಟಿರುವ ಹದಿನಾಲ್ಕು ಲೋಕಗಳೂ ಅವನನ್ನೇ ಆಶ್ರಯಿಸಿರುತ್ತವೆ. ಇಲ್ಲಿಯೂ ಕೂಡ ಮರದ ಬೊಂಬೆಯು ಮರವನ್ನಾಶ್ರಯಿಸಿರುವಂತೆ–ಎಂದು ತಿಳಿಯಬೇಕು. ಮತ್ತು ಆ ಪರಮಾತ್ಮನು ಎರಡು ಕಾಲಿನ ಹಾಗೂ ನಾಲ್ಕು ಕಾಲಿನ ಎಲ್ಲಾ ಜೀವರುಗಳನ್ನೂ ಆಳುತ್ತಾನೆ. ಇಲ್ಲಿ ಆಳುವದೆಂದರೆ ಆಯಾ ಜೀವರುಗಳ ಹುಟ್ಟು, ಆಯುಸ್ಸು, ಆಹಾರ, ವಿದ್ಯೆ, ಕರ್ಮ, ಐಶ್ವರ್ಯ, ಸಾವಿನವರೆಗಿನ ಎಲ್ಲಾ ವಿವರಗಳನ್ನೂ ಬಲ್ಲವನಾಗಿದ್ದು ಆಯಾ ಕಾಲಕ್ಕೆ ಆಯಾ ಪ್ರಾಣಿಗಳಿಗೆ ಆಯಾ ಫಲಗಳನ್ನುಂಟುಮಾಡುವದು–ಎಂದರ್ಥ. ಆದ್ದರಿಂದಲೇ ಅವನನ್ನು ಸರ್ವಜ್ಞನೆಂದೂ ಸರ್ವವಿತ್ ಎಂದೂ ಕರೆಯುತ್ತಾರೆ. ಇಂಥ ಪರಮಾತ್ಮನಿಗೆ ಅಲ್ಲದೆ ನಾವು ಬೇರೆ ಯಾರಿಗೆತಾನೆ ನಮ್ಮ ಹವಿರಾದಿಗಳನ್ನು ಅರ್ಪಿಸೋಣ ? ಎಂದಭಿಪ್ರಾಯ.

'ಕಸ್ಮೈ ದೇವಾಯ' ಎಂಬ ವಾಕ್ಯಕ್ಕೆ ಭಾಷ್ಯಕಾರರು 'ಏಕಸ್ಮೈ ದೇವಾಯ' ಎಂದು ಅರ್ಥಮಾಡಿ ಏಕಾರಲೋಪವು ಇಲ್ಲಿ ಆಗಿದೆ– ಎಂದು ತಿಳಿಸುತ್ತಾರೆ. ಇದರಂತೆ

ತಾತ್ಪರ್ಯಗ್ರಹಣಮಾಡಿದರೂ ಮಂತ್ರಾರ್ಥವು ಚೆನ್ನಾಗಿ ಹೊಂದುತ್ತದೆ. ಹೇಗೆಂದರೆ ಏಕಸ್ಮೈ ಎಂದರೆ ಒಬ್ಬನೇ ಆದ ದೇವನಿಗೆ ನಾವು ಹವಿರರ್ಪಣೆಮಾಡೋಣ-ಎಂದರ್ಥ ವಾಗುತ್ತದೆ. ಕರ್ಮಕಾಂಡದಲ್ಲಿ ನೂರಾರು ದೇವತೆಗಳನ್ನು ಕುರಿತ ಬೇರೆಬೇರೆಯಾದ ಯಜ್ಞ-ಯಾಗ, ವ್ರತ, ಹೋಮ,: ಜಪಾದಿ ಅನುಷ್ಠಾನಗಳಿವೆ. ಪ್ರತಿಯೊಂದು ದೇವತೆಗೂ ಗೊತ್ತಾದ ಆಕಾರ, ಗುಣ, ಶಕ್ತಿ, ಐಶ್ವರ್ಯ, ವೀರ್ಯ, ತೇಜಸ್ಸು, ಅಧಿಕಾರ, ಸ್ಥಾನ- ಮುಂತಾದ ವಿಶೇಷಗಳಿವೆ. ಕರ್ಮಾನುಷ್ಠಾನಕಾಲಕ್ಕೆ ಈ ಭೇದ ಗಳು ಅಗತ್ಯವೇ ಸರಿ. ಆಗ ಯಾವದಾದರೊಂದು ದೇವತೆಯನ್ನು ಆರಾಧಿಸಿದರೆ ಎಲ್ಲಾ ದೇವತೆಗಳನ್ನೂ ಆರಾಧಿಸಿದಂತಾಗುವದಿಲ್ಲ. ಆದರೆ ಯಾವ ದೇವತೆಯೂ ತನ್ನ ಸ್ವರೂಪದಿಂದ ಪರಮಾತ್ಮನಿಗಿಂತ ಬೇರೆಯಾಗಿರುವದಿಲ್ಲ. ಎಲ್ಲಾ ದೇವತೆಗಳ ಆತ್ಮನೂ ಪರಮಾತ್ಮನೊಬ್ಬನೇ ಆಗಿರುತ್ತಾನೆ. ಬೇರೆಬೇರೆಯ ದೇವತೆಗಳಿಗಾಗಿ ಅರ್ಪಿಸಿದ ಪೂಜಾಹೋಮಹವಿರರ್ಪಣಾದಿಗಳೆಲ್ಲ ಪರಮಾತ್ಮನಿಗೇ ಸಲ್ಲುತ್ತವೆ. ಯಾವ ದೇವತೆಯೇ ಕರ್ತೃವಿಗೆ ಫಲವನ್ನು ನೀಡಿದರೂ ಅದು ಭಗವಂತನೇ ನೀಡಿದ ಫಲ ವಾಗಿರುತ್ತದೆ. ಈ ವಿಶಾಲದೃಷ್ಟಿಯಿಂದ ನೋಡಿದರೆ 'ಏಕಸ್ಮೈ ದೇವಾಯ' ಎಂದರೆ ಇರುವ ಒಬ್ಬನೇ ದೇವನಿಗೆ ನಾವು ಹವಿರರ್ಪಣವನ್ನು ಮಾಡುತ್ತೇವೆ- ಎಂಬಿದು ಸಮಂಜಸವಾಗಿಯೇ ಇದೆ.

ಈಗ ೪-೧ನೆಯ ಮಂತ್ರವನ್ನು ವಿಚಾರಮಾಡೋಣ. ಇದರಲ್ಲಿ ಹಿಂದಿನ ಮಂತ್ರಗಳಲ್ಲಿ ವರ್ಣಿಸಿರುವ ಭಗವಂತನನ್ನೇ ಮತ್ತೆ ರೂಪಾಂತರದಿಂದ ಸ್ತುತಿಸ ಲಾಗಿದೆ. ಆದರೂ ಕೆಲವು ವಿವರಗಳನ್ನು ನೋಡೋಣ. ಭಗವಂತನು ಜಗತ್ತಿನ ಉತ್ಪತ್ತಿಕಾರಣನಾಗಿದ್ದು ಸೂಕ್ಷ್ಮಾತಿಸೂಕ್ಷ್ಮನಾಗಿದ್ದಾನೆಂದು ತಿಳಿಸಿದೆ. ಸೂಕ್ಷ್ಮ ನೆಂದರೆ ಇಂದ್ರಿಯಗೋಚರನಲ್ಲವೆಂದೇ ಅರ್ಥ. ಆದರೂ ಆ ಭಗವಂತನನ್ನು ಇಂದ್ರಿಯಗಳಿಂದ ಕಂಡುಕೊಳ್ಳಬೇಕೆಂದು ಜನರು ಬಯಸುತ್ತಾರೆ. ಭೌತಿಕವಿಜ್ಞಾನಿ ಗಳು ಸೂಕ್ಷ್ಮವಸ್ತುಗಳನ್ನು ಯಂತ್ರಗಳ ಸಹಾಯದಿಂದ ಕಂಡುಕೊಳ್ಳುತ್ತಾರೆ. ಇದು ನಿಜ. ಆದರೆ ಜಗತ್ಕಾರಣವನ್ನೂ ಹಾಗೆಯೇ ಪ್ರಯತ್ನಮಾಡಿ ಇಂದಲ್ಲ-ನಾಳೆ ಕಂಡುಕೊಳ್ಳಬಹುದೆಂಬ ಭಾವನೆ ಅವರಿಗೆ ಇದೆ. ವಸ್ತುಶಾಸ್ತ್ರಪ್ರವೀಣರಾದ ಅವರು ವಸ್ತುವಿಭಜನೆಯ ಮೂಲಕ ಮೂಲವಸ್ತುವಿನ ಜ್ಞಾನಕ್ಕೆ ಮುಟ್ಟಲು ಸಾಧ್ಯ ವಾದೀತು ಎಂದು ನಂಬಿದ್ದಾರೆ. ಇದೆಲ್ಲವೂ ಜ್ಞೇಯಪದಾರ್ಥಗಳ ಬಗ್ಗೆ ಹೊಂದ ಬಹುದಾದ ಕ್ರಮವಾಗಿದೆ. ಆದರೆ ಯಾವ ವಿಜ್ಞಾನಿಯು ಮೂಲವಸ್ತುವನ್ನು ಕಂಡುಕೊಳ್ಳಲು ಹೊರಡುವನೋ ಅವನ ಆತ್ಮನೇ ಆಗಿರುವ ಪರಬ್ರಹ್ಮವು ಹೇಗೆ ತಾನೆ ವೇದ್ಯವಾದೀತು ? ಬೃಹದಾರಣ್ಯಕೋಪನಿಷತ್ತಿನಲ್ಲಿ ಯಾಜ್ಞವಲ್ಕ್ಯರು 'ವಿಜ್ಞಾತಾರಮರೇ ಕೇನ ವಿಜಾನೀಯಾತ್' (ಎಲೈ, ಮೈತ್ರೇಯಿಯೆ, ವಿಜ್ಞಾತೃ ವಾದ ಈ ಆತ್ಮನನ್ನು ಯಾವ ಕರಣಗಳಿಂದಲಾಗಲಿ ಕಂಡುಕೊಳ್ಳುವದಾದರೂ

ಹೇಗಾದೀತು ?) ಎಂದಿರುತ್ತಾರೆ. ಇದು ಪರಮಾತ್ಮನು ಜ್ಞೇಯನಲ್ಲವೆಂದೂ ಜ್ಞಾತೃವಿನ ಸ್ವರೂಪವಾದ ಆತ್ಮನೇ ಅವನೆಂದೂ ತಿಳಿಸುತ್ತದೆ. ಆದ್ದರಿಂದ ಭೌತಿಕ ವಿಜ್ಞಾನಿಗಳ ಅನ್ವೇಷಣೆಯು ವ್ಯವಹಾರಕ್ಷೇತ್ರದಲ್ಲಿ ಎಷ್ಟೇ ಕರಾರುವಾಕ್ಕಾಗಿರಲಿ, ಪ್ರಯೋಗಶೀಲವಾಗಿರಲಿ– ನಮ್ಮೆಲ್ಲರ ಆತ್ಮನಾದ ಭಗವಂತನ ಜ್ಞಾನಕ್ಕೆ ಅದು ಉಪಯೋಗವಾಗಲಾರದು. ಯಾವ ವಿಜ್ಞಾನಿಯೂ ಎಂದಿಗೂ ತನ್ನ ಸಾಧನೆಗಳಿಂದ ಆತ್ಮನನ್ನು ಮುಟ್ಟಲಾರನು. ಆದ್ದರಿಂದ ಜಗತ್ಕಾರಣನಾದ ಪರಮಾತ್ಮನ ಅನ್ವೇಷಣೆ ಯೇನಿದ್ದರೂ ಋಷಿಗಳು ಗೊತ್ತುಪಡಿಸಿರುವ ಅಧ್ಯಾತ್ಮಯೋಗಮಾರ್ಗದಿಂದ ಮಾತ್ರ ಸಾಧ್ಯವಾಗಿರುತ್ತದೆ. ಹೀಗಿರುವಲ್ಲಿ ವೇದಾಂತವನ್ನು ವಿಜ್ಞಾನದೊಡನೆ ಸಮನ್ವಯ ಮಾಡಬೇಕೆಂದು ಹೊರಟಿರುವ ಕೆಲವು ಪ್ರಾಜ್ಞರ ಪ್ರಯತ್ನವು ಕೊಂಚದೂರದ ವರೆಗೆ ಸರಿಯೆಂದು ಕಂಡರೂ ಮುಂದುವರೆದಂತೆಲ್ಲ ಅದು ತಪ್ಪೆಂದು ಗೊತ್ತಾಗುತ್ತದೆ. ಇದನ್ನೇ ಕಠೋಪನಿಷತ್ತಿನಲ್ಲಿ 'ದೂರಮೇತೇ ವಿಪರೀತೇ ವಿಷೂಚೀ ಅವಿದ್ಯಾ ಯಾ ಚ ವಿದ್ಯೇತಿ ಜ್ಞಾತಾ'.ಎಂದು ತಿಳಿಸಲಾಗಿದೆ. ಅವಿದ್ಯಾಮಾರ್ಗವು ವಿದ್ಯಾಮಾರ್ಗಕ್ಕೆ ವಿರುದ್ಧದಿಕ್ಕಿನಲ್ಲಿದ್ದು ಅದು ಎಂದಿಗೂ ವಿದ್ಯಾಫಲವನ್ನುಂಟುಮಾಡಲಾರದು. ಆದ್ದ ರಿಂದ ಬ್ರಹ್ಮವನ್ನು ಜಗತ್ಕಾರಣವೆಂದಮಾತ್ರಕ್ಕೆ ಅದನ್ನು ಜ್ಞೇಯವಾಗಿಸಿ ಅನ್ವೇಷಣೆ ಮಾಡಬಾರದೆಂದೇ 'ಸೂಕ್ಷ್ಮಾತಿಸೂಕ್ಷ್ಮಂ' ಎಂದು ತಿಳಿಸಲಾಗಿದೆ. ಮತ್ತು ಅದು 'ಕಲಿಲಸ್ಯ ಮಧ್ಯೇ' ಎಂದರೆ ಅವಿದ್ಯಾ ಮತ್ತು ತತ್ಕಾರ್ಯವಾದ ಮಾಯೆಯ ನಡುವೆಯೇ ಇದ್ದುಕೊಂಡಿದ್ದು ಯಾರು ಮಾಯೆಯನ್ನು ದಾಟಿ ಅವಿದ್ಯೆಯೆಂಬ ತೆರೆಯನ್ನು ಸರಿಯಿಸಿ ತಮ್ಮ ಆತ್ಮನಾಗಿ ಕಂಡುಕೊಳ್ಳುವರೋ ಅವರಿಗೆ ತಿಳಿದುಬರು ವದೆಂದು ಹೇಳಲಾಗಿದೆ.

ಈಗ ಜಗತ್ಕಾರಣವಾದ ಪರಬ್ರಹ್ಮವನ್ನು ಅನೇಕರೂಪವೆಂದು ತಿಳಿಸಿರುವದನ್ನು ವಿಚಾರಮಾಡೋಣ. ನಾಮರೂಪಗಳೆಂಬ ಉಪಾಧಿಗಳ ಮೂಲಕ ಬ್ರಹ್ಮವನ್ನು ಗುರುತಿಸುವದೇನೋ ಸುಲಭವೇ ಸರಿ. ಆದರೆ ನಾಮರೂಪಗಳಿಂದ ಬ್ರಹ್ಮವನ್ನು ಪ್ರತ್ಯೇಕಿಸಿ ಅರಿಯುವದು ಕಷ್ಟಸಾಧ್ಯವಾಗಿದೆ. ಏಕೆಂದರೆ ನಾಮರೂಪಗಳನ್ನು ತೆಗೆದರೆ ತತ್ತ್ವವು ಶೂನ್ಯವೆಂದೇ ನಮಗೆ ಭಾಸವಾಗುತ್ತದೆ. ನಮಗೆ ಇಂಥ ತಾದಾತ್ಮ್ಯವು ನಾಮರೂಪಗಳೊಡನೆ ಉಂಟಾಗಿದೆ. ಅದಕ್ಕಾಗಿ ಶಾಸ್ತ್ರವು ಅನೇಕ ರೂಪಗಳಾಗಿ ತೋರಿಕೊಂಡಿರುವದೂ ಬ್ರಹ್ಮವೇ– ಎಂದು ತಿಳಿಸುತ್ತಿದೆ. ಸಾಧಕನು ಉಪಾಯವಾಗಿ ನಾಮರೂಪಗಳ ಧರ್ಮವನ್ನೂ ಪರಬ್ರಹ್ಮದ ಸ್ವರೂಪವನ್ನೂ ಚಿಂತಿಸಿ ಸತ್‌ಸ್ವರೂಪದಲ್ಲಿ ನಾಮರೂಪಗಳು ಅಧ್ಯಾರೋಪಿತವಾಗಿರುವದನ್ನು ಕಂಡುಕೊಳ್ಳ ಬೇಕು. ಯಾವಾಗ ನಾಮರೂಪಬುದ್ಧಿಯು ಬಾಧಿತವಾಗುವದೋ ಆಗ ಬ್ರಹ್ಮವು ಸ್ವಯಂಸಿದ್ಧವೂ ಸ್ವಯಂಪ್ರಕಾಶವೂ ಆಗಿ ಅನುಭವಕ್ಕೆ ಬರುವದು. ಅಲ್ಲಿಯವರೆಗೆ ನಾಮರೂಪಗಳ ಅವಲಂಬನೆಯು ಬ್ರಹ್ಮಾನ್ವೇಷಣೆಗೆ ಸಾಧನವಾಗಿರುತ್ತದೆ. ಆದ್ದರಿಂದ

ಶ್ರುತಿಯಲ್ಲಿ 'ಅನೇಕರೂಪ'ವೆಂದು ಬ್ರಹ್ಮವನ್ನು ತಿಳಿಸಲಾಗಿದೆ. ಬ್ರಹ್ಮವು ಅನೇಕ ರೂಪವೂ ಅರೂಪವೂ ಆಗಿರುತ್ತದೆ- ಎಂಬ ಮಾತಿಗೆ ಇದೇ ಅರ್ಥವು. ಅದು ಅನೇಕರೂಪವಾಗಿ ತೋರಿಕೊಳ್ಳುತ್ತದೆ. ಆದರೆ ಸ್ವತಃ ಅರೂಪವಾಗಿದೆ- ಎಂದು ತಿಳಿಯಬೇಕು. ಮತ್ತು ಅದು ತಾನು ಒಂದೇ ಆಗಿದೆ. ಏಕೆಂದರೆ ಅದನ್ನು ಸರಿಗಟ್ಟುವ ಮತ್ತೊಂದು ವಸ್ತುವಿಲ್ಲ. ಅಥವಾ ಅದರಲ್ಲಿಯೇ ಸ್ವಗತಭೇದವೂ ಇಲ್ಲ. ಶರೀರ ವೆಂದರೆ ಒಂದೇ ಪದಾರ್ಥವೆಂಬುದು ನಿಜವಾದರೂ ತಲೆ, ಕಾಲು, ಕೈ- ಮುಂತಾದ ಸ್ವಗತಭೇದವಿದೆ. ಆದರೆ ಬ್ರಹ್ಮವು ಏಕರೂಪವೂ ಪ್ರಜ್ಞಾನಘನವೂ ಆಗಿದ್ದು ಸ್ವಗತ ಭೇದರಹಿತವಾಗಿದೆ. ಎಲ್ಲಾ ವಸ್ತುಗಳನ್ನೂ ಒಳಗೂ ಹೊರಗೂ ವ್ಯಾಪಿಸಿರುವದ ರಿಂದ 'ಪರಿವೇಷ್ಟಿತಾರಂ' ಎಂದೂ ಕರೆಯಲಾಗಿದೆ.

ಈಗ ಈ ಬ್ರಹ್ಮವನ್ನರಿತವನಿಗೆ ಪರಮಶಾಂತಿಯು ದೊರಕುವದೆಂಬುದನ್ನು ವಿಚಾರಮಾಡೋಣ. ಶಾಂತಿಯೆಂದರೇನು ? ಅಂತಃಕರಣವು ಅಲುಗಾಡದೆ ನಿಂತರೆ ಶಾಂತಿಯೆಂದು ನಾವು ತಿಳಿದಿದ್ದೇವೆ. ಅಥವಾ ಅಂತಃಕರಣವು ಲಯವಾದರೂ ಶಾಂತಿಯಾಯಿತೆಂದು ನಾವು ಭಾವಿಸುತ್ತೇವೆ. ಯಾವದಾದರೂ ಇಷ್ಟವಸ್ತುವು ದೊರಕಿದಾಗ ಕ್ಷಣಕಾಲ ಅಂತಃಕರಣವು ಅಲುಗಾಡದೆ ನಿಲ್ಲುವದು. ಆಗ ಸುಖ ವಾಯಿತು- ಎನ್ನುವೆವು. ಹಾಗೆಯೇ ಸುಷುಪ್ತಿಯಲ್ಲಿ ಅದು ಲಯವಾದಾಗ ಸುಖ ವಾಗಿದ್ದೆನು- ಎನ್ನುತ್ತೇವೆ. ಇವು ಆತ್ಯಂತಿಕವಲ್ಲ. ಏಕೆಂದರೆ ಇಷ್ಟವಸ್ತುವು ಬೇಡ ವಾದರೆ ಅಥವಾ ಮರೆಯಾದರೆ ಅಂತಃಕರಣವು ಅಲುಗಾಡುತ್ತದೆ. ಹಾಗೆಯೇ ನಿದ್ರೆ ಯಿಂದ ಎಚ್ಚತ್ತಾಗಲೂ ಅದು ಚಾಂಚಲ್ಯವನ್ನು ಹೊಂದಿಬಿಡುತ್ತದೆ. ಆದ್ದರಿಂದ ಎಂದೆಂದಿಗೂ ಮನಸ್ಸು ಅಲುಗಾಡದೆ ಇರುವಂತೆ ಮಾಡಿಕೊಳ್ಳಲು ಸಾಧ್ಯವೇಇಲ್ಲ. ಮನಸ್ಸಿರುವವರೆಗೆ ಲಯವಿಕ್ಷೇಪಗಳಿದ್ದೇ ಇರುವವು. ಇದನ್ನು ಅಮನಸ್ಕಾಗಿ ಪರಿ ವರ್ತಿಸಿದರೆ ಮಾತ್ರ ನಿಜವಾದ ಶಾಂತಿಯು ಸಿಗುವದು. ಶ್ರೀ ಗೌಡಪಾದರು ತಿಳಿಸು ವಂತೆ ಆತ್ಮಸತ್ಯಾನುಬೋಧದಿಂದ ಮನಸ್ಸು ಅಮನೀಭಾವವನ್ನು ಹೊಂದಿದಲ್ಲಿ- ಹೇಗೆ ಸಮುದ್ರದಲ್ಲಿ ಒಂದಾದ ಹನಿನೀರು ಮತ್ತೆ ಬೇರೆಯಾಗಲಾರದೋ ಹಾಗೆ- ಮನಸ್ಸು ಆತ್ಮನಾಗಿಯೇ ನೆಲೆನಿಂತು ತನ್ನತನವನ್ನು ನೀಗಿಕೊಂಡಾಗ ಪರಮಶಾಂತಿ ಯು ಲಭಿಸುತ್ತದೆ. ಹಾಗೆ ಆಗಬೇಕಾದರೆ ಆತ್ಮಪ್ರತ್ಯಯವು ಸಂತತವಾಗಿ ಸಾಧನೆಯ ಕಾಲಕ್ಕೆ ಅಖಂಡವಾಗಿ ಹರಿದು ಕಡೆಯಲ್ಲಿ ಪ್ರತ್ಯಯರೂಪವನ್ನು ಕಳೆದುಕೊಂಡು ಆತ್ಮನಾಗಿಯೇ ಅನುಭವದಲ್ಲಿ ನೆಲೆಗೊಳ್ಳಬೇಕು. ಆಗ ಶಾಂತಿಯು ಪರಿಪೂರ್ಣ ವಾಗುವದು. ಇದನ್ನು ಸಾಧನಸಾಧ್ಯವೆಂದು ಮೊದಮೊದಲು ಹೇಳಬಹುದಾದರೂ ಫಲರೂಪವಾಗಿ ನಿಂತಾಗ ಸ್ವಭಾವವೇ ಹೀಗಿರುತ್ತದೆ-ಎಂದು ಗೊತ್ತಾಗುತ್ತದೆ. ಇಂಥ ಆತ್ಯಂತಿಕವಾದ ಶಾಂತಿಯು ಆ ಪರಬ್ರಹ್ಮದ ಜ್ಞಾನದಿಂದ ಲಭಿಸುತ್ತದೆ- ಎಂದು ಉಪನಿಷತ್ತಿನಲ್ಲಿ ತಿಳಿಸಿದೆ.

# ಸುಭಾಷಿತಮಂಜರಿ

**ಅಮೃತಂ ಕಿರತಿ ಹಿಮಾಂಶುಃ ವಿಷಮೇವ ಫಣೀ ಸಮುದ್ಗಿರತಿ ।**
**ಗುಣಮೇವ ವಕ್ತಿ ಸಾಧುರ್ದೋಷಮಸಾಧುಃ ಪ್ರಕಾಶಯತಿ ॥**

೧. ಚಂದ್ರನು ಅಮೃತಕಿರಣವನ್ನು ಹರಡುತ್ತಾನೆ. ಸರ್ಪವು ವಿಷವನ್ನೇ ಕಾರುತ್ತದೆ. ಹಾಗೆ ಸತ್ಪುರುಷನು ಗುಣವನ್ನೇ ಹೇಳುತ್ತಾನೆ. ದುಷ್ಟನು ದೋಷವನ್ನೇ ಬೆಳಕಿಗೆ ತರುತ್ತಾನೆ.

**ಅಶ್ವಃ ಶಸ್ತ್ರಂ ಶಾಸ್ತ್ರಂ ವೀಣಾ ವಾಣೀ ನರಶ್ಚ ನಾರೀ ಚ ।**
**ಪುರುಷವಿಶೇಷಂ ಪ್ರಾಪ್ಯ ಭವಂತ್ಯಯೋಗ್ಯಾಶ್ಚ ಯೋಗ್ಯಾಶ್ಚ ॥**

೨. ಕುದುರೆ, ಶಸ್ತ್ರ, ಶಾಸ್ತ್ರ, ವೀಣೆ, ಮಾತು, ಮನುಷ್ಯ, ಹೆಂಗಸು--ಇವರು ವಿಶಿಷ್ಟವಾದ ಪುರುಷರನ್ನು ಸೇರಿದಾಗ ಅನುಗುಣವಾಗಿ ಯೋಗ್ಯರಾಗುವದೂ ಉಂಟು. ಅಯೋಗ್ಯರಾಗುವದೂ ಉಂಟು.

**ಅಸಂಖ್ಯೈರಪಿ ನಾತ್ಮೀಯೈಃ ಅಲ್ಪೈರಪಿ ಪರಸ್ಥಿತೈಃ ।**
**ಗುಣೈಃ ಸಂತಃ ಪ್ರಹೃಷ್ಯಂತಿ ಚಿತ್ರಮೇಷಾಂ ವಿಚೇಷ್ಟಿತಮ್ ॥**

೩. ತಮ್ಮಲ್ಲಿ ಬೇಕಾದಷ್ಟು ಒಳ್ಳೆಯ ಗುಣಗಳಿದ್ದರೂ ಬೇರೆಯವರಲ್ಲಿರುವ ಕೆಲವೇ ಗುಣಗಳನ್ನು ತಿಳಿದು ಸತ್ಪುರುಷರು ಆನಂದಿಸುತ್ತಾರೆ. ಇವರ ವರ್ತನೆ ವಿಚಿತ್ರ.

**ಅಹೋ ದುರ್ಜನಸಂಸರ್ಗಾತ್ ಮಾನಹಾನಿಃ ಪದೇಪದೇ ।**
**ಪಾವಕೋ ಲೋಹಸಂಗೇನ ಮುದ್ಗರೈರಭಿಹನ್ಯತೇ ॥**

೪. ದುರ್ಜನರ ಸಂಗದಿಂದ ಹೆಜ್ಜೆಹೆಜ್ಜೆಗೂ ಮಾನಹಾನಿಯಾಗುತ್ತದೆ. ಬೆಂಕಿಯು ಕಬ್ಬಿಣದೊಡನೆ ಸೇರಿದ್ದರಿಂದ ಸುತ್ತಿಗೆಗಳ ಹೊಡೆತವನ್ನು ಅನುಭವಿಸಬೇಕಾಗುತ್ತದೆ.

**ಅಹಮೇವ ಗುರುಃ ಸುದಾರುಣಾನಾಮ್**
**ಇತಿ ಹಾಲಾಹಲ ಮಾ ಸ್ಮ ತಾತ ದೃಪ್ಯಃ ।**
**ನನು ಸಂತಿ ಭವಾದೃಶಾನಿ ಭೂಯೋ**
**ಭುವನೇಽಸ್ಮಿನ್ ವಚನಾನಿ ದುರ್ಜನಾನಾಮ್ ॥**

೫. ಎಲೈ ಹಾಲಾಹಲವಿಷವೆ, 'ಕ್ರೂರಿಗಳಲ್ಲಿ ನಾನೇ ದೊಡ್ಡವನು' ಎಂದು ಅಹಂಕಾರಪಡದಿರು. ನಿನ್ನಂಥ ಕೆಟ್ಟಗುಣಗಳುಳ್ಳವರ ಮಾತುಗಳು ಬೇಕಾದಷ್ಟಿವೆ.

**ಅಹೋ ಖಲಭುಜಂಗಸ್ಯ ವಿಚಿತ್ರೋಽಯಂ ವಧಕ್ರಮಃ ।**
**ಅನ್ಯಸ್ಯ ದಶತಿ ಶ್ರೋತ್ರಮನ್ಯಃ ಪ್ರಾಣೈರ್ವಿಯುಜ್ಯತೇ ॥**

೬. ದುಷ್ಟನೆಂಬ ಹಾವು ಜನರನ್ನು ಕೊಲ್ಲುವ ರೀತಿಯು ಅಚ್ಚರಿಗೊಳಿಸುವಂತಹುದು. ಅದು ಒಬ್ಬನ ಕಿವಿಯನ್ನು ಕಚ್ಚುತ್ತದೆ. ಇನ್ನೊಬ್ಬನು ಸಾಯುತ್ತಾನೆ. (ಚಾಡಿಹೇಳಿ ಬೇರೆಯವರಿಗೆ ತೊಂದರೆಮಾಡುತ್ತಾನೆ.)

---

# ಸತ್ಯಕಾಮನ ಪತ್ರಗಳು

## ದಾನಧರ್ಮಗಳ ರಹಸ್ಯ

"ನಾನೊಂದು ಧರ್ಮಕಾರ್ಯವನ್ನು ಕೈಗೊಂಡು ಐದಾರುವರ್ಷಗಳಾದವು. ಈವರೆಗೆ ಸೇಕಡ ೮೫ ಭಾಗ ಪೂರೈಸಿದೆ. ಇದನ್ನು ಪೂರ್ಣಗೊಳಿಸಲು ಸೊಂಟ ಕಟ್ಟಿರುತ್ತೇನೆ. ಬಹುದ್ರವ್ಯಸಾಧ್ಯವಾದ ಈ ಕಾರ್ಯದಲ್ಲಿ ಮಹಾಜನರ ಸಹಾಯ ವನ್ನು ಬೇಡಲೇಬೇಕಾಯಿತು. ಕೆಲವರು ಉದಾರವಾಗಿ ಕೊಟ್ಟು ಪ್ರೋತ್ಸಾಹಿಸಿ ದರು. ಮತ್ತೆ ಕೆಲವರು ವಾಗ್ದಾನಮಾಡಿ ಅಷ್ಟಕ್ಕೇ ನಿಂತರು. ಇನ್ನು ಕೆಲವರು ಭಾಗಶಃ ಕೊಟ್ಟರು. ಈ ಸಂದರ್ಭಗಳಲ್ಲಿ ಬಿರುನುಡಿಗಳು, ತಿರಸ್ಕಾರ, ಅಪಪ್ರಚಾರ, ಹಿಂಸೆ– ಮುಂತಾದ ಎಲ್ಲಾ ಶಿಕ್ಷೆಗಳಿಗೂ ಒಳಗಾಗಬೇಕಾಯಿತು. ಆದರೂ ಪ್ರಾರಂ ಭಿಸಿದ ಕಾರ್ಯವನ್ನು ನಡುವೆ ಕೈಬಿಡಬಾರದೆಂತ ಮನಸ್ಸುಮಾಡಿದ್ದೇನೆ. ನನಗೆ ವೃದ್ಧಾಪ್ಯವೂ ಬಂದಿದೆ. ನನಗೇನಾದರೂ ಸಲಹೆಗಳನ್ನು ನೀಡುವಿರಾ?" ಎಂದು ಕೇಳಿ ನೀವು ಬರೆದಿರುವ ಪತ್ರವು ಬಂದಿದೆ.

ನಿಮ್ಮ ಪತ್ರವನ್ನೂ ಪ್ರಕಟನೆಯನ್ನೂ ನೋಡಿದೆನು. ಸದುದ್ದೇಶದಿಂದಲೂ ಗುರುಭಕ್ತಿಯಿಂದಲೂ ಸಮಾಜಸೇವಾದೃಷ್ಟಿಯಿಂದಲೂ ಸ್ವಾರ್ಥವಿಲ್ಲದೆ ನೀವು ಕೈಗೊಂಡಿರುವ ಧರ್ಮಕಾರ್ಯವು ಸ್ತುತ್ಯವಾಗಿದೆ. ಲೋಕದಲ್ಲಿ ಅಧ್ಯಾತ್ಮಕ್ಷೇತ್ರದಲ್ಲಿ ಸಿದ್ಧರು, ಸಾಧಕರು– ಎಂಬ ಎರಡು ಬಗೆಯ ಜನರಿರುತ್ತಾರೆ. ಇವರಲ್ಲಿ ತಪಃಸಿದ್ಧರು ನಿಷ್ಕಾಮರಾಗಿರುತ್ತಾರೆ. ಅವರಿಗೆ ಯಾವ ಸಂಕಲ್ಪಗಳೂ ಅಂತಃಕರಣದಲ್ಲಿರುವದಿಲ್ಲ. ಬ್ರಹ್ಮನಿಷ್ಠೆಯೇ ಅವರ ಜೀವನವಾಗಿದ್ದು ಏಕಾಂತದಲ್ಲಿರುತ್ತಾರೆ. ವ್ಯವಹಾರವನ್ನೆಲ್ಲ ಪರಮಾರ್ಥದಲ್ಲೇ ಅಡಕಮಾಡಿರುತ್ತಾರೆ. ಇಂಥವರು ಮಠ, ಆಶ್ರಮ, ಸಂಸ್ಥೆಗಳ ಸ್ಥಾಪನೆಗಾಗಲಿ ಜನಸೇವೆಗಾಗಲಿ ಹಾತೊರೆಯುವದಿಲ್ಲ. ದಾನಮಾಡಿ ಪುಣ್ಯಕಟ್ಟಿ ಕೊಳ್ಳುವ ಚಿಂತೆಯೂ ಇವರಿಗಿಲ್ಲ. ಏಕೆಂದರೆ ಪಾಪಪುಣ್ಯಗಳನ್ನೇ ಇವರು ದಾಟಿರು ತ್ತಾರೆ. ಆದರೂ ಶಿಷ್ಯರು ಬಿಡದೆ ಇಂಥವರ ಹೆಸರು ಹೇಳಿಕೊಂಡು ಧರ್ಮಕಾರ್ಯ ಗಳನ್ನು ನಡೆಸುತ್ತಾರೆ. ಈಗಲೂ ಇಂಥ ಸಂದರ್ಭಗಳನ್ನು ಕಾಣಬಹುದು. ಇನ್ನು ಸಾಧಕರು ತಮ್ಮ ಶ್ರೇಯೋಮಾರ್ಗದಲ್ಲಿ ನಡೆಯುವಾಗ ಸಿದ್ಧಪುರುಷರಷ್ಟು ಪಕ್ವ ವಾಗಿರುವದಿಲ್ಲವಾದ್ದರಿಂದಲೂ ಅಂತಃಕರಣದಲ್ಲಿ ಆಶೋತ್ತರಗಳನ್ನು ಹೊಂದಿರುವದ ರಿಂದಲೂ ಕೆಲವು ಸಮಸ್ಯೆಗಳನ್ನು ಎದುರಿಸಲೇಬೇಕಾಗುತ್ತದೆ. ಸತ್ಯಧರ್ಮಗಳ ಸೂಕ್ಷ್ಮವನ್ನು ಇಂಥವರು ಅರಿಯದೆಇರುವದರಿಂದ ತಮ್ಮ ಇಷ್ಟಾನುಸಾರ ಕಾರ್ಯ ಸಾಧನೆ ಆಗದೆಇರುವಾಗ ಪರಿತಪಿಸುತ್ತಾರೆ. ಹಾಗೂ ಬೇರೊಬ್ಬರನ್ನು ಅದಕ್ಕೆ ಗುರಿಮಾಡುತ್ತಾರೆ. ಇದು ಸ್ವಾಭಾವಿಕ. ಲೋಕದೃಷ್ಟಿಯಲ್ಲಿ ಇಂಥ ಸಾಧಕರಿಗೆ ಅಡ್ಡಿ ಆತಂಕಗಳು ಬರುವದೂ ಆಶ್ಚರ್ಯವಲ್ಲ. ಸಾಧಕರಿಗೆ ಸಿದ್ಧರಾಗುವ ಸ್ಥಿರಸಂಕಲ್ಪವೂ ಪ್ರಯತ್ನವೂ ಇದ್ದಲ್ಲಿ ಭಗವದನುಗ್ರಹದಿಂದ ಸಂಕಟಗಳನ್ನು ದಾಟಿ ಕೃತಾರ್ಥರಾಗು ತ್ತಾರೆ. ಇದಕ್ಕೆ ಕಾಲಾವಕಾಶವು ಬಹಳ ಬೇಕು. ನಿಮ್ಮ ಪ್ರಯತ್ನದಲ್ಲಿ ಕಾಲವು ಮಿಂಚಿಲ್ಲ. ಮುಂದೆ ಅನುಕೂಲವಾದೀತು.

ಧರ್ಮಕಾರ್ಯಗಳನ್ನಾರಂಭಿಸುವವರಿಗೆ ಒಂದೆರಡು ಸೂಚನೆಗಳನ್ನು ಕೊಡಲು ನಾನು ಇಚ್ಛಿಸುತ್ತೇನೆ. ಮೊದಲನೆಯದಾಗಿ 'ಅಲ್ಪಾರಂಭಃ ಕ್ಷೇಮಕರಃ' ಎಂಬ ಮಾತು ಸಜ್ಜನರಲ್ಲಿ ಪ್ರಚಲಿತವಾಗಿದೆ. ಇದರ ಅಭಿಪ್ರಾಯವೇನೆಂದರೆ: ಯಾವ ಧರ್ಮಕಾರ್ಯವನ್ನಾದರೂ ಸ್ವಲ್ಪವೇ ಪ್ರಾರಂಭಿಸಬೇಕು. ಅದು ತನ್ನ ಶಕ್ತಿ ಇತಿ ಮಿತಿಗಳಿಗೆ ಒಳಪಟ್ಟಿರಬೇಕು. ಬೇರೆಯವರ ಸಹಾಯವು ದೊರೆತಂತೆಲ್ಲ ಹಿಗ್ಗಿಸು ವಂತಿರಬೇಕು. ಯಾವ ಪರಿಸ್ಥಿತಿಯಲ್ಲಿಯೂ ಆ ಕಾರ್ಯವು ಮಾನಸಿಕಶಾಂತಿಗೆ ಭಂಗ ತರಬಾರದು. ಹೀಗೆ ಆಲೋಚಿಸಿ ಆತ್ಮಬುದ್ಧಿ(ತನ್ನ ತಿಳಿವಳಿಕೆ)ಗೆ ಬೆಲೆಕೊಟ್ಟು ಪರಬುದ್ಧಿಯನ್ನು ವಿಶ್ವಾಸಮಾಡದೆ ಕಾರ್ಯಾರಂಭಮಾಡಬೇಕು. ದೈವಾನುಗ್ರಹ ದಿಂದ ಸಜ್ಜನರೇ ದೊರಕಿ ಕಾರ್ಯವು ಯಶಸ್ವಿಯಾದರೆ ಅದನ್ನು ಭಗವಂತನಿಗೆ ಅರ್ಪಿಸಬೇಕು. ತನ್ನೊಳಗೆ ಏನಾದರೂ ದೋಷಗಳಿವೆಯೆ ? ಕಾರ್ಯಸಾಧನೆ ಏಕೆ ಆಗಿಲ್ಲ? ಎಂದು ಆಗಾಗ್ಗೆ ಪರೀಕ್ಷಿಸಿಕೊಳ್ಳುತ್ತಿರಬೇಕು. ಅಂತರಂಗದಲ್ಲಿ ಅಧ್ಯಾತ್ಮ ಸಾಧನೆಯೂ ತಪಸ್ಸೂ ಮುಂದುವರೆಯುತ್ತಿರಬೇಕು. ಅಲ್ಲಿ ರಾಗದ್ವೇಷಗಳಿಗೆ ಅವಕಾಶವಿರಬಾರದು. ಕೊಟ್ಟವನನ್ನು ಅಥವಾ ಕೊಡುತ್ತೇನೆ ಎಂದವನನ್ನು ಹೊಗ ಳುವದು, ಅತಿಯಾಗಿ ನಂಬುವದು, ಕೊಡದಿರುವವನನ್ನು ತೆಗಳುವದು-ಇಂಥ ಪ್ರಸಂಗ ಗಳಿಗೆ ಅವಕಾಶ ಕೊಡಬಾರದು. ಆದರೆ ವ್ಯವಹಾರದಲ್ಲಿ ಇದನ್ನು ಜಾರಿಗೆತರುವದು ಕಷ್ಟಸಾಧ್ಯವೆಂಬುದು ನಿಜ. ಸಾಧಕನಾದವನಿಗೆ ವ್ಯವಹಾರದ ಪರಿಣಾಮಕ್ಕಿಂತ ತನ್ನ ಅಂತರಂಗದ ಮೇಲಿನ ಪರಿಣಾಮವೇ ಮುಖ್ಯವಾಗಿರುತ್ತದೆ. ಅಂತರಂಗವು ಕಲಕಿದಂತೆಲ್ಲ ದಾನ, ಧರ್ಮ, ಪರೋಪಕಾರಗಳಲ್ಲಿ ಕಿಲುಬುಂಟಾಗುತ್ತದೆ ಹೀಗೆ ಸಾಧಕನು ತನ್ನ ಹಾದಿಯಲ್ಲಿ ಎಚ್ಚರಿಕೆ ವಹಿಸಬೇಕಾಗುತ್ತದೆ. ಬೇರೊಬ್ಬರ ಮನಸ್ಸಿನ ಪರಿಸ್ಥಿತಿಯ ಅಧ್ಯಯನವು ಸಾಧಕನಿಗೆ ಅನವಶ್ಯಕವೆಂದು ಹೇಳಬೇಕಾ ದದ್ದೇ ಇಲ್ಲ.

ಪ್ರಾಜ್ಞರ ಇನ್ನೊಂದು ಮಾತು 'ದಾನಂ ದಾತೃವಶಮ್' ಎಂಬಿದು. ಇದರ ಅಭಿಪ್ರಾಯವೇನೆಂದರೆ : ದಾನವು ಅದನ್ನು ಕೊಡುವವನ ಅಧೀನಕ್ಕೂ ಇಷ್ಟಕ್ಕೂ ಒಳಪಟ್ಟಿರುತ್ತದೆ. ಹೀಗಿರುವಲ್ಲಿ ದಾನಿಗಳನ್ನು ಮತ್ತೆಮತ್ತೆ ಕೇಳಿ ಬೇಸರಿಸುವದೇಕೆ? ಅವರೇ ಸಂತೋಷವಾಗಿ ಕೊಡಬೇಕೇ ಹೊರತು ಒತ್ತಾಯವು ಸರಿಯಲ್ಲ. ಕೆಲವರು ದಾಕ್ಷಿಣ್ಯಕ್ಕೆ ಆಗಲಿ-ಎಂದಿರುತ್ತಾರೆಯೇ ಹೊರತು ಮನಸ್ಸಿನಲ್ಲಿ ಭಾವನೆಯಿರುವದಿಲ್ಲ. ಇನ್ನು ಕೆಲವರ ಹಣವು ದಾನಕ್ಕೆ ತಕ್ಕದ್ದಾಗಿರುವದಿಲ್ಲವಾದ್ದರಿಂದ ದೇವರು ಅವರಿಗೆ ಮನಸ್ಸುಕೊಡುವದಿಲ್ಲ. ಹೀಗೆಲ್ಲ ಸಂದರ್ಭಗಳಿರುತ್ತವೆ. ಧರ್ಮಕಾರ್ಯಗಳಿಗೆ ನೀಡುವ ದಾನವು 'ದಾತವ್ಯಮಿತಿ ಯದ್ದಾನಂ....' ಎಂಬ ಗೀತಾವಾಕ್ಯಕ್ಕೆಅನುಗುಣ ವಾಗಿರಬೇಕು. ಆದ್ದರಿಂದ ನೀವು ಇನ್ನುಮುಂದೆ ಧನಸಂಗ್ರಹಕ್ಕಾಗಿ ಮಾಡುವ ಪ್ರಯತ್ನದಲ್ಲಿ ಮನಸ್ಸಿಗೆ ಕಿರಿಕಿರಿಯಾಗುವಂಥ ಪ್ರಸಂಗಗಳನ್ನು ಕೈಬಿಡಬೇಕು. ಅಥವಾ ಸ್ಥಿತಪ್ರಜ್ಞರಾಗಬೇಕು. ಆ ರೀತಿ ಗುರುಗಳು ನಿಮ್ಮನ್ನು ಅನುಗ್ರಹಿಸಲಿ !

————

# ಆರಿಸಿದ ಅರಳುಮೊಗ್ಗುಗಳು

( ಶ್ರೀ ಗೋಂದಾವಳಿಮಹಾರಾಜರ ಪ್ರವಚನಗಳಿಂದ )

೧. ನಾಟಕದಲ್ಲಿ ಒಬ್ಬ ಮನುಷ್ಯನು ರಾಜನಾದರೇನು? ಭಿಕ್ಷುಕನಾದರೇನು? ಪ್ರತ್ಯಕ್ಷ ಜಗತ್ತಿನಲ್ಲಿ ಅವನಿಗೆ ಯಾವ ಮಹತ್ತ್ವವೂ ಇರುವದಿಲ್ಲ. ಒಂದುವೇಳೆ ಭಿಕ್ಷುಕನ ಪಾತ್ರ ಮಾಡುವವನು ಅದನ್ನು ಉತ್ತಮರೀತಿಯಿಂದ ಮಾಡಿದರೆ ಜನರು ಅವನನ್ನು ಹೊಗಳುತ್ತಾರೆ. ಆದರಂತೆ ಪ್ರಪಂಚದಲ್ಲಿ ಶ್ರೀಮಂತರಾದರೇನು? ಬಡವನಾದರೇನು ? ಅದಕ್ಕೆ ಮಹತ್ತ್ವನಿರುವದಿಲ್ಲ. ಅವನು ಭಗವಂತನ ಅನುಸಂಧಾನವನ್ನು ಎಷ್ಟು ಕಾಯ್ದುಕೊಂಡಿರುತ್ತಾನೆ–ಎಂಬುದಕ್ಕೆ ನಿಜವಾದ ಮಹತ್ತ್ವವಿದೆ. ನಾವು ಹಣ ಸಂಗ್ರಹಿಸಿದರೇನೂ ತಪ್ಪಲ್ಲ. ಆದರೆ ಅದು ನಮಗೆ ಆಧಾರವೆನಿಸಬಾರದು. ಅದು ನಮ್ಮ ಅನುಸಂಧಾನಕ್ಕೆ ಅಡ್ಡಬರಬಾರದು. ಎಲ್ಲಿಯವರೆಗೆ ನಮ್ಮ ಸುಖವು ವಿಷಯಗಳನ್ನವಲಂಬಿಸಿದೆಯೋ ಅಲ್ಲಿಯವರೆಗೆ ನಮಗೆ ಭಕ್ತಿಯ ನಿಜವಾದ ಸುಖವು ಪ್ರಾಪ್ತವಾಗುವದಿಲ್ಲ. ಕೇವಲ ಭಗವಂತನೊಬ್ಬನೇ ಬೇಕೆಂದು ನಮಗೆ ಮನಃಪೂರ್ವಕ ಅನ್ನಿಸಿದರೆ ಆವನು ನಿಶ್ಚಯವಾಗಿ ಪ್ರಾಪ್ತವಾಗುತ್ತಾನೆ.

೨. ಥರ್ಮಾಮೀಟರು ಜ್ವರವನ್ನು ತೋರಿಸುತ್ತದೆಯೇ ಹೊರತು ದೂರ ಮಾಡುವದಿಲ್ಲ. ಅದರಂತೆ ಶಾಸ್ತ್ರಗಳು ನಾವು ಎಲ್ಲಿ ತಪ್ಪುತ್ತೇವೆ ಎಂಬುದನ್ನು ತೋರಿಸುತ್ತವೆ. ಏನುಮಾಡಬೇಕೆಂಬುದನ್ನು ತೋರಿಸುತ್ತವೆ. ಆದರೆ ಮಾಡುವದು ನಮ್ಮಕಡೆಗೇ ಇರುತ್ತದೆ. ಸಮರ್ಥರಿಗೆ ಶ್ರೀರಾಮನ ದರ್ಶನವಾಯಿತು. ನಮಗೇಕೆ ಆಗುವದಿಲ್ಲ ? ನಾವು ಸಮರ್ಥರಂತೆ ಶ್ರದ್ಧೆಯಿಂದ ಹಾಗೂ ಆದರದಿಂದ ಅಖಂಡ ಉಪಾಸನೆ ಮಾಡುವದಿಲ್ಲ. ಆದ್ದರಿಂದ ಆಗುವದಿಲ್ಲ. ಏನಾದರೂ ಮಾಡಿರಿ ; ಆದರೆ 'ನಾನು ರಾಮನವನಿರುತ್ತೇನೆ' ಎಂಬ ಭಾವನೆಯನ್ನು ಜಾಗ್ರತವಾಗಿಡಿರಿ. ನಾಮವನ್ನು ತಿಳಿದೊ, ತಿಳಿಯದೆಯೊ, ಶ್ರದ್ಧೆಯಿಂದಲೊ, ಅಶ್ರದ್ಧೆಯಿಂದಲೊ– ಯಾವದೇ ರೀತಿಯಾಗಿ ತೆಗೆದುಕೊಳ್ಳಿರಿ. ರಾಮನು ನಿಮಗೆ ಅನ್ನವಸ್ತ್ರಗಳನ್ನು ಕಡಿಮೆಮಾಡಲಾರನೆಂಬ ವಿಶ್ವಾಸ ತಾಳಿರಿ. ನಾಮವನ್ನು ಶ್ರದ್ಧೆಯಿಂದ ತೆಗೆದುಕೊಂಡರೆ ವಿಶೇಷ ಫಲವಿರುತ್ತದೆ. ಆದ್ದರಿಂದ ಅಖಂಡನಾಮದಲ್ಲಿ ಮಗ್ನರಾಗಿ ಆನಂದದಿಂದಿರೋಣ.

೩. ಆಜ್ಞೆಯು ಎಷ್ಟೇ ಕಠೋರವಾಗಿದ್ದರೂ ಅದರ ಕೆಳಗೆ ಸಹಿ ಇಲ್ಲದೇಇದ್ದರೆ ಆ ಆಜ್ಞೆಗೆ ಮಹತ್ತ್ವವಿರುವದಿಲ್ಲ. ಸಾಹೇಬರ ಸಹಿ ಇದ್ದ ಕಾಗದಕ್ಕೆ ಮಹತ್ತ್ವವಿರುತ್ತದೆ. ನಾಮವು ಎಲ್ಲಾ ಸಾಧನೆಗಳಲ್ಲಿ ಸಹಿ ಇದ್ದಂತೆ ಇರುತ್ತದೆ. ಒಬ್ಬ ಹುಡುಗನಿಗೆ ಬಹಳ ಸಿಟ್ಟು ಬರುತ್ತಿತ್ತು. ಕ್ರೋಧದ ಆವೇಶದಲ್ಲಿ ಅವನು ತನ್ನ ತಲೆಯನ್ನು ಗೋಡೆಗೆ ಅಪ್ಪಳಿಸುತ್ತಿದ್ದನು. ಆ ಹುಡುಗನಿಗೆ ನಾನು 'ಪ್ರತಿದಿವಸ ಸ್ನಾನವಾದಮೇಲೆ ಗಂಧದಿಂದ ನಿನ್ನ ಹೊಟ್ಟೆಯಮೇಲೆ ರಾಮನಾಮ ಬರೆದುಕೊ. ಹಾಗೂ ನಿನಗೆ ಸಿಟ್ಟುಬಂದಾಗ ಅದರಕಡೆ ನೋಡು' ಎಂದು ಹೇಳಿದೆನು. ಈ

ಪ್ರಯೋಗದಿಂದ ಆ ಹುಡುಗನ ಕ್ರೋಧವು ತಾನಾಗಿಯೇ ಶಾಂತವಾಯಿತು. ನಿಜವಾಗಿಯೂ ನಾಮದಲ್ಲಿ ಎಂಥ ಪ್ರಚಂಡಶಕ್ತಿಯಿರುತ್ತದೆ! ನಾನು ಇಂದಿನವರೆಗೆ ಎಲ್ಲರಿಗೂ ನಾಮವನ್ನೇ ಹೇಳುತ್ತಾ ಬಂದಿರುತ್ತೇನೆ. ಯಾರಹತ್ತಿರ ನಾಮವಿರುತ್ತದೆಯೋ ಅವರ ಹಿಂದೆ ಮುಂದೆ ಯಾವಾಗಲೂ ಇದ್ದೇಇರುತ್ತೇನೆ.

೪. ವಾಸನೆಯ ಹಿಡಿತದಿಂದ ಬಿಡಿಸಿಕೊಳ್ಳುವದು ಬಹಳ ಕಠಿನವಾಗಿರುತ್ತದೆ. ಏಕೆಂದರೆ ಜೀವವು ವಾಸನೆಯ ಹೊಟ್ಟೆಯಿಂದಲೇ ಜನ್ಮವೆತ್ತಿಬಂದಿರುತ್ತದೆ. ಆ ವಾಸನೆಯನ್ನು ಗೆಲ್ಲುವದು ನಮ್ಮ ಮರಣದಷ್ಟು ಕಠಿನವಾಗಿರುತ್ತದೆ. ವಾಸನೆಯ ಹೊಟ್ಟೆಯಿಂದ ಜನ್ಮ, ಆ ಜನ್ಮವಾದಮೇಲೆ ಅಹಂಕಾರ, ಹಾಗೂ ವಾಸನೆಯ ಸಂಬಂಧದಿಂದ ಕಾಮಕ್ರೋಧಾದಿವಿಕಾರಗಳು ಹುಟ್ಟಬರುತ್ತವೆ. ಈ ಜೋಡಿಯ ವೈಶಿಷ್ಟ್ಯವೆಂದರೆ ಗಂಡನಿಗಿಂತ ಹೆಂಡತಿ ದೊಡ್ಡವಳಾಗಿರುತ್ತಾಳೆ. ಏಕೆಂದರೆ ಮೊದಲು ವಾಸನೆ; ಆಮೇಲೆ ಅದರಿಂದ ಅಹಂಕಾರ. ಭಗವಂತನ ಹತ್ತಿರ 'ವಾಸ'ಮಾಡಿದರೆ ಮಾತ್ರ ವಾಸನೆಯು ನಾಶವಾಗುತ್ತದೆ. ಪ್ರಪಂಚವು ಮೂಲತಃ ಉತ್ತಮವೂ ಅಲ್ಲ, ಹೀನವೂ ಅಲ್ಲ. ಪ್ರಪಂಚದಲ್ಲಿಯ ವಾಸನೆಯನ್ನು ತೆಗೆಯುವದೇ ಪರಮಾರ್ಥದ ಕೆಲಸವಾಗಿರುತ್ತದೆ.

೫. ಪ್ರಪಂಚದಲ್ಲಿ ಪ್ರಸಿದ್ಧಿಯು ಆವಶ್ಯಕತೆ ಇರುತ್ತದೆ. ಇದಕ್ಕೆ ವಿರುದ್ಧವಾಗಿ ಪರಮಾರ್ಥದಲ್ಲಿ ಗುಪ್ತತೆಯು ಆವಶ್ಯಕತೆ ಇರುತ್ತದೆ. ಒಬ್ಬ ಹೆಣ್ಣುಮಗಳು ತನಗೆ ಒಡವೆಗಳು ಬೇಕೆಂದು ತನ್ನ ಗಂಡನಹತ್ತಿರ ಹಟಮಾಡತೊಡಗಿದಳು. ಗಂಡನು ಆವಳಿಗೆ ಬೇಕಾದ ಎಲ್ಲಾ ಒಡವೆಗಳನ್ನೂ ಕೊಡಿಸುವದಾಗಿ ಒಪ್ಪಿಕೊಂಡನು. ಆದರೆ ಒಂದು ಷರತ್ತುಹಾಕಿದನು. ಏನೆಂದರೆ ಒಡವೆಗಳನ್ನು ಧರಿಸಿಕೊಂಡಿದ್ದಾಗ ಕೋಣೆಯ ಕಿಟಕಿ ಬಾಗಿಲುಗಳನ್ನು ಮುಚ್ಚಿ ಒಳಗೇ ಕುಳಿತಿರಬೇಕು. ಇಂಥ ಷರತ್ತನ್ನು ಅವಳೇಕೆ ಒಪ್ಪಿಕೊಂಡಾಳು? ಏಕೆಂದರೆ ತಾನು ಹಾಕಿಕೊಂಡ ಒಡವೆಗಳನ್ನು ಬೇರೆಯವರು ನೋಡುವದರಲ್ಲಿಯೇ ಆವಳಿಗೆ ಸಮಾಧಾನವೆನಿಸುತ್ತದೆ. ಇದು ಪ್ರಪಂಚದ ಪದ್ಧತಿಯಾಗಿರುತ್ತದೆ. ಪರಮಾರ್ಥದಲ್ಲಿ ಗುಪ್ತತೆಯ ಆವಶ್ಯಕತೆ ಇರುತ್ತದೆ. ನಮ್ಮ ಸಾಧನೆಯು ಯಾರ ದೃಷ್ಟಿಗೂ ಬೀಳದಂತೆ ನಾವು ಸಾವಧಾನವಾಗಿರಬೇಕು.

೬. ಪ್ರಪಂಚದಲ್ಲಿ ದ್ರವ್ಯದ ಅಪೇಕ್ಷೆ ಇದ್ದಂತೆ ಪರಮಾರ್ಥದಲ್ಲಿ ಭಾವದ ಅಪೇಕ್ಷೆ ಇರುತ್ತದೆ. ಪ್ರಪಂಚದಲ್ಲಿ ಹಣವಿಲ್ಲದೆ ಬದುಕಲಾರೆವು. ಹಾಗೆಯೇ ಪರಮಾರ್ಥದಲ್ಲಿ ಭಾವವಿಲ್ಲವಾದರೆ ಆಗಲೇಆರದು. ನಿಮ್ಮ ಭಾವವಿದ್ದಂತೆ ನಿಮಗೆ ಭಗವಂತನ ಪ್ರಾಪ್ತಿಯಾಗುತ್ತದೆ. ಪ್ರಹ್ಲಾದನಿಗೆ ಕಂಬದಲ್ಲಿಯೇ ದೇವರು ಪ್ರಾಪ್ತವಾದನು. ಅದರಂತೆ ನಾಮದೇವನು ಕಲ್ಲಿನ ಮೂರ್ತಿಗೂ ಉಣಿಸಿದನು. ಗೋಪಿಯರು ಭಾವದಿಂದಲೇ ಕೃಷ್ಣನನ್ನು ಒಳಿಸಾರಿದರು. ಹೀಗೆ ಭಾವವು ಪರಮಾರ್ಥದ ಸಾಧನವಾಗಿದೆ.

———

# ಪರಮಾರ್ಥಾತ್ಮನು ನಿತ್ಯಾಪ್ತಕಾಮನು

(ಶ್ರೀಸಚ್ಚಿದಾನಂದೇಂದ್ರಸರಸ್ವತೀಮಹಾಸ್ವಾಮಿಗಳವರು)

ಮನುಷ್ಯನು ತನ್ನ ಸ್ವಾಭಾವಿಕಸ್ಥಿತಿಯಲ್ಲಿ ಕಾಮಕರ್ಮಗಳಿಗೆ ಅಡಿಯಾಳಾಗಿರುತ್ತಾನೆ. ಕಾಡುಜನರಾಗಲಿ, ನಾಗರಿಕರಾಗಲಿ– 'ಯಾವದರ ಆಶೆಯೂ ನನಗಿಲ್ಲ' ಎನ್ನುವವನು ಒಬ್ಬನೂ ಇರುವದಿಲ್ಲ. ಸರಿಯಾಗಿ ಒಳಹೊಕ್ಕು ನೋಡಿದರೆ ನಾಗರಿಕತೆ –ಎಂದರೆ ಕಾಮಪಾಶಗಳ ಸೆಳೆತಕ್ಕೆ ಸಿಕ್ಕಿರುವದೇ– ಎನ್ನಬಹುದು.

ಕಾಡುಜನರಿಗೆ ಲೋಕಜ್ಞಾನವೂ ಕಡಿಮೆ. ಆದ್ದರಿಂದ ಅವರಿಗೆ ಪ್ರತೀಕ್ಷೆಗಳೂ ಕಡಿಮೆ. ಹಸಿವುಬಾಯಾರಿಕೆಗಳ ಬಾಧೆಯನ್ನು ತಪ್ಪಿಸಿಕೊಳ್ಳುವದಕ್ಕೆ ಏನಾದರೂ ಒಂದಿಷ್ಟು ಗೆಡ್ಡೆಗೆಣಸು, ಸ್ವಲ್ಪ ನೀರು–ಇಷ್ಟಾದರೆ ಸಾಕು. ಹಸಿವು ಬಹಳವಾಗಿ ಕಾಡಿದರೆ ತತ್ಕಾಲಕ್ಕೆ ಸಿಕ್ಕಿದ ಯಾವದಾದರೊಂದು ಪ್ರಾಣಿಯನ್ನು ಕೊಂದು ಹಸಿವನ್ನು ಇಂಗಿಸಿಕೊಳ್ಳುವದು ; ಚಳಿಸೆಕೆಗಳ ಅಥವಾ ಗಾಳಿಮಳೆಗಳ ಬಾಧೆಗೆ ಯಾವದಾದರೂ ಮರದ ತೊಗಟೆ ಅಥವಾ ಒಂದು ಮೃಗದ ಚರ್ಮ– ಇಷ್ಟನ್ನು ಹೊದೆದುಕೊಂಡು ಎಲ್ಲಿಯಾದರೂ ಸುಖನಿದ್ರೆಮಾಡಿದರೆ ಅಷ್ಟರಿಂದಲೇ ಕಾಡುಜನಕ್ಕೆ ಜೀವನದಲ್ಲಿ ತೃಪ್ತಿಯಾಗುವದು. ನೀತಿಧರ್ಮಗಳ ಅರಿವೇ ಇಲ್ಲದ್ದರಿಂದ ಪಾಪಪುಣ್ಯಗಳ ಭೀತಿಯೂ ಇಲ್ಲದೆ ಪಶುಪಕ್ಷಿಮೃಗಾದಿಗಳಂತೆಯೇ ಅವರು ಜೀವನವನ್ನು ಸಾಗಿಸುತ್ತಿರುವರು. ಆದರೆ ನಾಗರಿಕನೆಂಬವನು ಹಾಗಲ್ಲ. ಅವನಿಗೆ ಬಾಹ್ಯಲೋಕದ ಜ್ಞಾನವು ಹೆಚ್ಚಾಗಿರುವದು. ಇಂದ್ರಿಯಗಳು ಸೂಕ್ಷ್ಮವಾಗಿರುವವು. ಮನೋಬುದ್ಧಿಗಳು ಸೂಕ್ಷ್ಮವಸ್ತುಗ್ರಾಹಕಗಳಾಗಿ ದೂರದೃಷ್ಟಿಯುಳ್ಳವಾಗಿರುವವು. ಕಾಮಕ್ರೋಧಲೋಭಮೋಹಮದಮಾತ್ಸರ್ಯಗಳು ಅಂತಃಕರಣದಲ್ಲಿ ಎದ್ದುಕೊಂಡು ಅವನನ್ನು ಗೋಳಾಡಿಸುತ್ತಿರುವವು. ಅವನಿಗೆ ಹೊಸಹೊಸ ಕಾಮವಿಶೇಷಗಳು ಗೋಚರವಾಗುವವು. ಅದಕ್ಕಾಗಿ ಕಷ್ಟಪಟ್ಟು ಜೀವನವನ್ನು ದುಃಖಮಯವಾಗಿ ಮಾಡಿಕೊಳ್ಳುವದೂ ತಪ್ಪಿದ್ದಲ್ಲ.

ಶಾಸ್ತ್ರದ ತಿಳಿವಳಿಕೆಯು ಬಂದಮೇಲಂತೂ ಮನುಷ್ಯನಿಗೆ ಕಾಮಗಳು ಅಗಣಿತವಾಗುವವು. ಏಕೆಂದರೆ ಅವನಿಗೆ ಭೂಲೋಕವೇ ಅಲ್ಲದೆ ದೇವಪಿತ್ರಾದಿಲೋಕಗಳೂ ಇವೆಯೆಂದೂ ಅಲ್ಲಿರುವ ಭೋಗಗಳನ್ನು ಅನುಭವಿಸುವದಕ್ಕೆ ಇಂಥಿಂಥ ಕರ್ಮವನ್ನು ಮಾಡಬೇಕಾಗುವದೆಂದೂ ನಂಬಿಕೆಯು ಬೇರೂರಿಬಿಟ್ಟುಕೊಂಡಿರುತ್ತದೆ. ಜನ್ಮಾಂತರಗಳಲ್ಲಿ ನಂಬಿಕೆಯೂ ಅವನಿಗೆ ಉಂಟಾಗಿರುತ್ತದೆಯಾದ್ದರಿಂದ ಪುಣ್ಯಪಾಪಗಳಿಗೆ ಅನುಗುಣವಾಗಿ ಲೋಕಾಂತರಗಳಲ್ಲಿ ದೇಹಾಂತರಗಳನ್ನು ಪಡೆಯಬೇಕಾಗುವದೆಂಬ ನಂಬಿಕೆಯೂ ಗಟ್ಟಿಯಾಗಿರುವದರಿಂದ ಪಾಪದ ಫಲವನ್ನು ತಪ್ಪಿಸಿಕೊಳ್ಳುವದು, ಪುಣ್ಯದ ಫಲವನ್ನು ಸಂಪಾದಿಸಿಕೊಳ್ಳುವದು– ಈ ಕಾರ್ಯದಲ್ಲಿ ಎಡೆಬಿಡದೆ ತೊಡಗಿರುವ ಜೀವನಿಗೆ ಸ್ವಲ್ಪ ವಿವೇಕವು ಉದಯಿಸಿದಾಗ ಒಂದು ಪ್ರಶ್ನೆಯು ತಲೆದೋರಿ

ಕೊಳ್ಳುವದೆಂಬುದು ನಿರೀಕ್ಷಿಸತಕ್ಕದ್ದಾಗಿರುತ್ತದೆ. ಮನುಷ್ಯನಿಗೆ ಎಲ್ಲಾ ಕಾಮ ಗಳೂ ಪೂರ್ತಿಯಾಗಿ ಪ್ರಾಪ್ತವಾಗುವ ಸ್ಥಿತಿಯೊಂದುಂಟೆ ? 'ಇನ್ನು ನಾನು ಪಡೆದು ಕೊಳ್ಳಬೇಕಾದ ಕಾಮವು ಯಾವದೂ ಇಲ್ಲ; ಇನ್ನು ಯಾವ ಲೋಕಕ್ಕಾದರೂ ಹೋಗಿ ಇಂಥಿಂಥ ಕಾಮಗಳನ್ನು ಭೋಗಿಸುವದು ಉಳಿದಿದೆ– ಎಂಬುದು ನನ್ನ ಪಾಲಿಗೆ ಇಲ್ಲ' ಎಂಬ ಮನಃಸ್ಥಿತಿಯೂ ದೊರಕುವಹಾಗಿದೆಯೆ ?

ಈ ಪ್ರಶ್ನೆಗೆ ಒಂದು ಉತ್ತರವನ್ನು ಉಪನಿಷತ್ತಿನಲ್ಲಿ ಕೊಟ್ಟಿರುತ್ತದೆ. ಪುಣ್ಯದ ಫಲವಾಗಿ ದೇವಲೋಕವನ್ನು ಪಡೆದ ಇಂದ್ರಾದಿದೇವತೆಗಳಿಗೂ 'ಕೇವಲ ಕಾಮಪರಿ ಪೂರ್ತಿಗಾಗಿಯೇ ಜೀವನ' ಎಂಬ ಜೀವನಸೂತ್ರವನ್ನು ನಂಬಿದ್ದ ಅಸುರರಿಗೂ ಒಮ್ಮೆ ಒಂದು ಸುದ್ದಿಯು ಕಿವಿಗೆ ಬಿದ್ದಿತು. ದೇವಾಸುರರ ಮೂಲಪುರುಷನಾದ ಪ್ರಜಾ ಪತಿಯು ಒಂದು ಪ್ರಕಟನೆಯನ್ನು ಹೊರಡಿಸಿದ್ದನು. ಅದೇನೆಂದರೆ :

"ಜೀವರೆಲ್ಲರಿಗೂ ಸಮಾನವಾಗಿ ಒಬ್ಬ ಆತ್ಮನಿದ್ದಾನೆ. ಅವನಿಗೆ ಪುಣ್ಯಪಾಪ ಗಳ ಕಟ್ಟಿಲ್ಲ. ಅವನಿಗೆ ಆಯುಸ್ಸು ಕಡಿಮೆಯಾದಂತೆ ಮುಪ್ಪುಸಾವುಗಳು ಬರುವ ವೆಂಬ ಅಂಜಿಕೆಯಿರುವದಿಲ್ಲ. ಅವನಿಗೆ ಹಸಿವುನೀರಡಿಕೆಗಳ ಉಪಟಳವಿರುವದಿಲ್ಲ. ಅವನು ಸಂಕಲ್ಪಿಸಿದ್ದೆಲ್ಲವೂ ರೂಪಗೊಂಡಿರುವದು. ಅವನು ಕಾಮಿಸಿದ್ದೆಲ್ಲವೂ ದೊರ ಕಿರುವದು. ಈ ಆತ್ಮನನ್ನು ಅನ್ವೇಷಣೆಮಾಡಿ ಅನುಭವಕ್ಕೆ ತಂದುಕೊಂಡಾತನಿಗೆ ಸರ್ವಲೋಕಗಳೂ ಪ್ರಾಪ್ತವಾದಂತೆ, ಸರ್ವಕಾಮಗಳೂ ಪ್ರಾಪ್ತವಾದಂತೆಯೇ ಸರಿ."

ಈ ಸುದ್ದಿಯನ್ನು ಕೇಳಿ ದೇವತೆಗಳ ರಾಜನಾದ ಇಂದ್ರನೂ ಅಸುರರ ಅರಸಾದ ವಿರೋಚನನೂ ಒಬ್ಬರಿಗೊಬ್ಬರು ತಿಳಿಸದೆ ನೇರಾಗಿ ಪ್ರಜಾಪತಿಯ ಬಳಿಗೆ ಶಿಷ್ಯರಾಗಿ ಬಂದರು. ದೇವಾಸುರರುಗಳಿಗೆ ನಿತ್ಯಸ್ಪರ್ಧೆಯಿದ್ದರೂ ಪ್ರಜಾಪತಿಯು ವಾಗ್ದಾನ ಮಾಡಿದ್ದ ಪರಮಪುರುಷಾರ್ಥದ ಪ್ರಾಪ್ತಿಯ ಲಾಭದ ದೃಷ್ಟಿಯಿಂದ ಇಬ್ಬರೂ ಮೈತ್ರಿಯಿಂದಲೇ ಪ್ರಜಾಪತಿಯಲ್ಲಿ ಬ್ರಹ್ಮಚರ್ಯವ್ರತದಲ್ಲಿ ನಿಂತರು. ಕಟ್ಟಕಡೆಗೆ ದೀರ್ಘಕಾಲದ ಶುಶ್ರೂಷೆಯ ಫಲವಾಗಿ ಇಂದ್ರನು ಈ ಪರಮಾತ್ಮತತ್ತ್ವದ ಅನುಭವ ವನ್ನು ಪಡೆದುಕೊಂಡನು.

ಈ ಕಥೆಯು ದೇವಾಸುರರ ವಿಷಯದ್ದಾದರೂ ಲೋಕಾಂತರದಲ್ಲಿ ವಾಸಮಾಡು ವವರಿಗೆ ಮಾತ್ರ ಸಂಬಂಧಪಟ್ಟದ್ದು– ಎಂದು ಹೇಳುವದಕ್ಕಿಲ್ಲ. ಏಕೆಂದರೆ ಪ್ರಜಾ ಪತಿಯ ಬೋಧೆಯ ರೂಪದಿಂದ ಉಪನಿಷತ್ತು 'ಯಾವನು ತನ್ನ ಪರಮಾತ್ಮನ ಅರಿವನ್ನು ಮಾಡಿಕೊಳ್ಳುತ್ತಾನೋ ಅವನಿಗೆ ಸರ್ವಕಾಮಾವಾಪ್ತಿಯು ದಕ್ಕುವದು' ಎಂದು ಈ ಸಂದೇಶವನ್ನು ಎಲ್ಲರಿಗೂ ಸಮಾನವಾಗಿಯೇ ಹೇಳಿರುತ್ತದೆ. ಆದ್ದರಿಂದ ಆಸಕ್ತಿಯುಳ್ಳ ಯಾರುಬೇಕಾದರೂ ಈ ಅನ್ವೇಷಣೆಯಲ್ಲಿ ತೊಡಗಬಹುದಾಗಿದೆ.

ಪರಮಾತ್ಮನ ಅನ್ವೇಷಣೆ- ಎಂದರೆ ಹಿಮಾಲಯಪರ್ವತವೇ ಮುಂತಾದ ದುರ್ಗಮಪ್ರದೇಶಗಳಲ್ಲಿ ಔಷಧವಿಶೇಷಗಳನ್ನೋ, ಯಾವದೋ ದೂರಪ್ರದೇಶದಲ್ಲಿರುವ ಗನಿಯಲ್ಲಿರುವ ವಜ್ರಗಳನ್ನೋ ಹುಡುಕಿ ಕಂಡುಹಿಡಿಯುವಂಥ ಆಯಾಸದ ಕೆಲಸವೇನೂ ಅಲ್ಲ. ಪರಮಾತ್ಮನು ಎಲ್ಲಾ ಜೀವರಿಗೂ ಆತ್ಮನೇ- ಸ್ವರೂಪನೇ ಆಗಿರುತ್ತಾನೆ. ಅವನ ಅನ್ವೇಷಣೆಯೆಂದರೆ ಶಾಸ್ತ್ರದಲ್ಲಿ ಹೇಳಿರುವದನ್ನೂ ಪರಮಾತ್ಮಜ್ಞಾನವನ್ನು ಬಲ್ಲ ಆಚಾರ್ಯರ ಉಪದೇಶವನ್ನೂ ಅನುಸರಿಸಿ ನಮ್ಮಲ್ಲಿ ನಾವೇ ನಮ್ಮ ಸ್ವರೂಪವನ್ನು ಶೋಧನೆಮಾಡಿಕೊಳ್ಳುವದು. 'ಪರಮಾತ್ಮನ ವಿಜ್ಞಾನ'ವೆಂದರೆ ಭೌತಿಕವಿಜ್ಞಾನಶಾಸ್ತ್ರದಲ್ಲಿ ಹೇಳಿರುವಂತೆ ನಿರೀಕ್ಷಣೆ, ಪರೀಕ್ಷಣೆ, ಸಂವಾದೀಕರಣ- ಎಂಬ ಪದ್ಧತಿಯಿಂದ ಬಾಹ್ಯಪ್ರಮೇಯಪದಾರ್ಥಗಳನ್ನು ಶೋಧಿಸುವದೂ ಅಲ್ಲ. ನಮಗೆ ದೇಹ, ಇಂದ್ರಿಯ, ಮನಸ್ಸು- ಮುಂತಾದ ಯಾವಯಾವ ಕಾರ್ಯಕರಣಗಳಲ್ಲಿ ನಾನೆಂಬ ಬುದ್ಧಿಯುಂಟಾಗಿರುವದೋ ಅವುಗಳೊಳಗೆಲ್ಲ ಅತ್ಯಂತ ಒಳಗಿನ, ಅತ್ಯಂತಸೂಕ್ಷ್ಮವಾದ ಎಲ್ಲವನ್ನೂ ಮಾರ್ಪಡದ ಕೂಟಸ್ಥವಾದ ತತ್ತ್ವವದು-ಎಂಬಿದನ್ನು ಅನುಭವಕ್ಕೆ ತಂದುಕೊಳ್ಳುವದು.

ಇಲ್ಲಿ ತರ್ಕಪ್ರಧಾನವಾದ ತತ್ತ್ವಶಾಸ್ತ್ರಗಳಂತೆ ಊಹಿಸಿ ಒಂದು ಸಿದ್ಧಾಂತವನ್ನು ಏರ್ಪಡಿಸಬೇಕಾದದ್ದಿರುವದಿಲ್ಲ. ಹಿಂದೂ, ಬೌದ್ಧ, ಜೈನ, ಕ್ರೈಸ್ತ- ಮುಂತಾದವುಗಳೊಳಗೆ ಯಾವದಾದರೊಂದು ಮತವಿಶೇಷದಲ್ಲಿ ಶ್ರದ್ಧೆಯಿಟ್ಟು ಸಾಧನವಿಶೇಷಗಳನ್ನು ಮಾಡಿ ಸತ್ತಬಳಿಕ ಲೋಕಾಂತರದಲ್ಲಿ ಪಡೆಯುವ ಪುರುಷಾರ್ಥಸಾಧನಪ್ರಯತ್ನವೂ ಅಲ್ಲ. ನಮ್ಮೊಳಗೇ ನಾವು ಹೊಕ್ಕು ನಮ್ಮ ಪರಮಾರ್ಥತತ್ತ್ವವನ್ನು ಕಂಡುಕೊಂಡರೆ ಅದೇ ಜಗತ್ತಿನಲ್ಲಿರುವ ಎಲ್ಲಾ ಜೀವರುಗಳಿಗೂ ಆತ್ಮನೆಂಬ ಅನುಭವವುಂಟಾಗುವದು. ಆಗ ನಮ್ಮ ಆತ್ಮನಿಗಿಂತ ವ್ಯತಿರಿಕ್ತವಾಗಿ ಯಾವ ಕಾಮಗಳೂ ಇರುವದೇ ಇಲ್ಲ. ಆ ನಮ್ಮ ಆತ್ಮನು ಆಪ್ತಕಾಮನಾಗಿರುತ್ತಾನೆ- ಎಂದು ಶ್ರುತಿಗಳ ಹೇಳಿಕೆಯಿದೆ.

ಆತ್ಮನನ್ನು ಅರಿತುಕೊಳ್ಳಬಯಸುವವನು ರಾಜ್ಯಕೋಶಾದಿಗಳನ್ನು ತ್ಯಜಿಸಿ ಬಂದ ದೇವೇಂದ್ರನಂತೆ ಇಂದ್ರಿಯಭೋಗಪ್ರಧಾನವಾದ ಅಲ್ಪಕಾಮಗಳನ್ನು ತ್ಯಜಿಸಿ ಸದ್ಗುರುಗಳನ್ನು ಬಳಿಸಾರಬೇಕು. ಅನಂತರ ಅವರು ಹೇಳಿದಷ್ಟುಕಾಲವೂ ಬ್ರಹ್ಮಚರ್ಯ, ಗುರುಸೇವಾತತ್ಪರನಾಗಿರಬೇಕು. ಆಮೇಲೆ ಸದ್ಗುರೂಪದೇಶವನ್ನು ಸರಿಯಾಗಿ ಶ್ರವಣಮಾಡಿ ಅರ್ಥಮಾಡಿಕೊಳ್ಳಬೇಕು. ವಿರೋಚನನಂತೆ ತಪ್ಪರ್ಥವನ್ನೇ ಸರಿಯೆಂದು ಭಾವಿಸಿ ಹಿಂದಿರುಗಿಬಿಡಬಾರದು. ಮನನದಿಂದ ಸಂಶಯಗಳನ್ನು ದೂರೀಕರಿಸಿಕೊಳ್ಳಬೇಕು. ದೇವೇಂದ್ರನೇ ೧೦೧ ವರ್ಷಗಳಷ್ಟು ದೀರ್ಘಕಾಲ ಗುರುಕುಲವಾಸವನ್ನು ಮಾಡಿರುವಲ್ಲಿ ಉಳಿದವರು ಆತುರಪಟ್ಟರೆ ಆತ್ಮಜ್ಞಾನವು ಹೇಗೆತಾನೆ ದೊರಕೀತು ? ಆದ್ದರಿಂದ ವಿವೇಕಿಗಳಾದವರು ಈ ನಿವೃತ್ತಿಮಾರ್ಗವನ್ನನುಸರಿಸಿ ಈ ಉಪದೇಶದಲ್ಲಿ ಎಷ್ಟರಮಟ್ಟಿಗೆ ಸತ್ಯವಿದೆ ? ಎಂಬುದನ್ನು ಕಂಡುಕೊಳ್ಳುವ ಪ್ರಯತ್ನವನ್ನೇಕೆ ಮಾಡಬಾರದು ?

# ಹಿರಣ್ಯಗರ್ಭಸೂಕ್ತಮ್-೧

ಋಗ್ವೇದದ ಎಂಟನೆಯ ಅಷ್ಟಕದಲ್ಲಿ ಏಳನೆಯ ಅಧ್ಯಾಯ-ಮೂರನೆಯ ವರ್ಗದಲ್ಲಿ ಈ ಸೂಕ್ತವಿದೆ. ಇದರಲ್ಲಿ ಹತ್ತು ಋಕ್ಕುಗಳಿವೆ. ಈ ಸೂಕ್ತಕ್ಕೆ ಪ್ರಜಾಪತಿ ಪುತ್ರನಾದ ಹಿರಣ್ಯಗರ್ಭನೇ ಋಷಿಯು. ತ್ರಿಷ್ಟುಪ್ ಛಂದಸ್ಸಿನಲ್ಲಿ ಋಕ್ಕುಗಳಿವೆ. ಪ್ರಜಾಪತಿಯೇ ದೇವತೆಯು. ಈಗ ಈ ಮಂತ್ರಗಳನ್ನು ವಿಚಾರಮಾಡೋಣ. ಒಂದನೆಯ ಮಂತ್ರವು ಹೀಗಿದೆ :

ಓಂ ॥ ಹಿರಣ್ಯಗರ್ಭಃ ಸಮವರ್ತತಾಗ್ರೇ ಭೂತಸ್ಯ ಜಾತಃ
ಪತಿರೇಕ ಆಸೀತ್ । ಸ ದಾಧಾರ ಪೃಥಿವೀಂ ದ್ಯಾಮುತೇಮಾಂ
ಕಸ್ಮೈ ದೇವಾಯ ಹವಿಷಾ ವಿಧೇಮ ॥

ಈ ಹತ್ತು ಋಕ್ಕುಗಳ ಕೊನೆಯ ಪಾದಗಳಲ್ಲಿ- ಹತ್ತನೆಯದನ್ನು ಬಿಟ್ಟು ಉಳಿದೆಲ್ಲವುಗಳಲ್ಲಿಯೂ 'ಕಸ್ಮೈ ದೇವಾಯ ಹವಿಷಾ ವಿಧೇಮ' ಎಂಬ ವಾಕ್ಯವು ಪಲ್ಲವಿಯಂತೆ ಪುನರುಕ್ತವಾಗಿ ಬಂದಿದೆ. ಕಸ್ಮೈ ಎಂದರೆ ಯಾರಿಗೆ ? ಎಂಬಿದು ಸಾಮಾನ್ಯಾರ್ಥವು. ಆದರೆ ಕಿಮ್‌ಶಬ್ದಕ್ಕೆ ಇಲ್ಲಿ ಪ್ರಜಾಪತಿ, ಸುಖ, ಬಯಕೆ- ಮುಂತಾದ ಅರ್ಥಗಳನ್ನೂ ಕೊಡಲಾಗಿದೆ. ಕಸ್ಮೈ ಎಂದರೆ ಪ್ರಜಾಪತಿ ಎಂಬ ದೇವನಿಗೆ ಎಂದು ಮೊದಲನೆಯ ಅರ್ಥವು. ಸೃಷ್ಟಿಕರ್ಮಕ್ಕಾಗಿ ಕಾಮಿಸುವವನಾದ್ದರಿಂದ ಆ ಬಯಕೆಯುಳ್ಳ ದೇವನಿಗೆ- ಎಂದು ಎರಡನೆಯ ಅರ್ಥ. ಕಂ ಎಂದರೆ ಸುಖವೆಂದು ಅರ್ಥಮಾಡಿದರೆ ಸುಖಸ್ವರೂಪನಾದ ದೇವನಿಗೆ-ಎಂದು ಮೂರನೆಯ ಅರ್ಥ. ಕಂ ಎಂಬುದೇ ಒಂದು ಹೆಸರು ಎಂದಿಟ್ಟುಕೊಂಡರೆ ಕ ಎಂಬ ದೇವನಿಗೆ ಎಂದು ನಾಲ್ಕನೆಯ ಅರ್ಥವೂ ಆಗುತ್ತದೆ. ಒಟ್ಟಿನಲ್ಲಿ ಪ್ರಜಾಪತಿ, ಹಿರಣ್ಯಗರ್ಭ-ಇವೆಲ್ಲವೂ ಸೃಷ್ಟಿಕರ್ತನಾದ ಚತುರ್ಮುಖಬ್ರಹ್ಮನನ್ನೇ ಹೇಳುತ್ತವೆ. ಇವನು ಪರಮಾತ್ಮನ ಮಾನಸಪುತ್ರನೆನ್ನಬಹುದು. ಇವನಿಗೆ ಹುಟ್ಟುವಾಗಲೇ ಧರ್ಮಜ್ಞಾನವೈರಾಗ್ಯ ಐಶ್ವರ್ಯಗಳು ಸಹ ಸಿದ್ಧವಾಗಿರುವವು. ಇವನ ಹುಟ್ಟು ಗೋಪ್ಯವಾಗಿದ್ದು ಎಲ್ಲಿಂದ ಬಂದನೆಂಬುದು ಇವನಿಗೇ ತಿಳಿಯದೆ ಇರುವದರಿಂದ ಆತ್ಮಭೂಃ, ಸ್ವಯಂಭೂಃ ಎಂದೂ ಕರೆಯುವರು. ಸೃಷ್ಟಿಯಲ್ಲಿ ಮೊದಲನೆಯ ವ್ಯಕ್ತಿಯಾದ್ದರಿಂದ ಪ್ರಥಮ ಪ್ರಜೆ-ಎನ್ನುವರು. ಇವನು ಒಂದು ಸಂಪೂರ್ಣಕಲ್ಪಕಾಲಕ್ಕೆ ಒಡೆಯನು. ಮನೋಮಯನು. ಪುರಾಣಗಳಲ್ಲಿ ಇವನನ್ನು ಭಗವಂತನ ನಾಭಿಕಮಲದಿಂದ ಹುಟ್ಟಿದವನೆಂದು ತಿಳಿಸಿರುತ್ತದೆ. ಇಡಿಯ ಸೃಷ್ಟಿಯೆಲ್ಲವೂ ಇವನ ಕಾರ್ಯವಾಗಿದೆ. ಇವನು ಇರುವ ಸ್ಥಳವನ್ನು ಸತ್ಯಲೋಕ ಅಥವಾ ಬ್ರಹ್ಮಲೋಕವೆಂದು ಕರೆಯುತ್ತಾರೆ. ಇವನಿಂದ ಮುಂದೆ ವಿರಾಟ್‌ಪುರುಷನೂ ದೇವತೆಗಳೂ ಹುಟ್ಟುವರು. ಆದ್ದರಿಂದ ಇವನು ಎಲ್ಲರಿಗೂ ಪಿತೃವೂ ಪಿತಾಮಹನೂ ಆಗಿರುವನು. ಇವನ ಮಹಿಮೆಯು ಅಪಾರವಾದುದು.

ಈ ಪ್ರಜಾಪತಿಬ್ರಹ್ಮನನ್ನು ಕುರಿತು ಈಗ ಸ್ತುತಿಸಲಾಗುವದು. ಅಗ್ರೇ ಎಂದರೆ ಸೃಷ್ಟಿಯ ಆದಿಯಲ್ಲಿ ಈ ಹಿರಣ್ಯಗರ್ಭನು ಆವಿರ್ಭವಿಸಿದನು. ಇವನಿಗೆ ಮೂಲನೆಂದರೆ ಪರಮಾತ್ಮನಾದ ನಾರಾಯಣನೇ ಆಗಿರುತ್ತಾನೆ. ಆ ನಾರಾಯಣತತ್ತ್ವವು ವ್ಯವಹಾರಾತೀತವಾದ್ದರಿಂದ ಅವನನ್ನು ಸಂಸಾರಚಕ್ರದಲ್ಲಿ ಅಡಕಮಾಡಲಾಗುವದಿಲ್ಲ. ಏಕೆಂದರೆ ವ್ಯಕ್ತಾವ್ಯಕ್ತಗಳನ್ನು ಮೀರಿದ ಪುರುಷೋತ್ತಮನು ಅವನಾಗಿರುತ್ತಾನೆ. ಆದ್ದರಿಂದ ಪ್ರಜೆಗಳ ದೃಷ್ಟಿಯಿಂದ ಪ್ರಜಾಪತಿಯಾದ ಹಿರಣ್ಯಗರ್ಭನೇ ಮೊದಲನೆಯ ಪ್ರಜೆಯೆಂದು ತಿಳಿಯಬೇಕು. ಇಂಥ ಪ್ರಜಾಪತಿಯು ಮೊದಲು ಉಂಟಾದನು. ಇವನು ಹುಟ್ಟಿದ ಮಾತ್ರದಿಂದಲೇ ಬ್ರಹ್ಮಾಂಡದ ಎಲ್ಲಾ ಪ್ರಾಣಿಗಳಿಗೂ ಒಡೆಯನಾದನು. ತಾನು ಒಬ್ಬನೇ ಎಲ್ಲವನ್ನೂ ಆಳುವವನಾದನು. ಇದು ಈತನ ಮಹಿಮೆಯು. ಹಿಂದಿನ ಕಲ್ಪದಲ್ಲಿದ್ದ ಪ್ರಜೆಗಳಲ್ಲೆಲ್ಲ ಅತ್ಯಂತ ಪುಣ್ಯಶಾಲಿಯೂ ಪಾಪರಹಿತನೂ ಆದವನನ್ನು ಮುಂದಿನ ಕಲ್ಪಕ್ಕೆ ಪ್ರಜಾಪತಿಯನ್ನಾಗಿ ಪರಮಾತ್ಮನೇ ನೇಮಕಮಾಡುತ್ತಾನೆ. ಹೀಗೆ ಭಗವಂತನಿಂದ ನೇಮಿಸಲ್ಪಟ್ಟ ಅತ್ಯಂತ ಪರಿಶುದ್ಧ ವ್ಯಕ್ತಿಯೇ ಹಿರಣ್ಯಗರ್ಭನು. ಈತನೇ ಮುಂದೆ ಭೂಮಿ, ದ್ಯುಲೋಕಾದಿಗಳೆಲ್ಲವನ್ನೂ ಸೃಷ್ಟಿಸುತ್ತಾನೆ. ಅವೆಲ್ಲವೂ ಇವನ ಹೊಟ್ಟೆಯಲ್ಲಿ ಅಡಗಿರುವವು. ಸೃಷ್ಟಿಯ ಪ್ರಾರಂಭದಲ್ಲಿ ಹೊರಬರುವವು. ಇವನಿಗೆ ಅಗತ್ಯವಾದ ತಿಳಿವಳಿಕೆಯನ್ನೂ ಸೃಷ್ಟಿಸಾಮರ್ಥ್ಯವನ್ನೂ ಪರಮಾತ್ಮನೇ ಅನುಗ್ರಹಿಸುತ್ತಾನೆ. ಹೀಗೆ ಪ್ರಥಮಪ್ರಜೆಯೆನಿಸಿದ ಇವನು ಭೂಮಿ, ದ್ಯುಲೋಕಾದಿಗಳನ್ನು ಧರಿಸಿರುವನಷ್ಟೆ. ಇಂಥ ಪ್ರಜಾಪತಿ ದೇವನನ್ನು ನಾವು ಹವಿಸ್ಸುಗಳಿಂದ ಪರಿಚರ್ಯೆಮಾಡುವೆವು– ಎಂದರೆ ಆರಾಧಿಸುವೆವು– ಎಂದಭಿಪ್ರಾಯ. ವಿಧೇಮ ಎಂಬಿದಕ್ಕೆ ಪರಿಚರೇಮ– ಎಂದು ಭಾಷ್ಯಕಾರರು ಅರ್ಥವಿವರಣೆಮಾಡಿರುತ್ತಾರೆ. ಈಗ ಎರಡನೆಯ ಋಕ್ಕನ್ನು ವಿಚಾರಮಾಡೋಣ.

**ಓಂ ॥ ಯ ಆತ್ಮದಾ ಬಲದಾ ಯಸ್ಯ ವಿಶ್ವ ಉಪಾಸತೇ**
**ಪ್ರಶಿಷಂ ಯಸ್ಯ ದೇವಾಃ । ಯಸ್ಯ ಛಾಯಾಮೃತಂ ಯಸ್ಯ**
**ಮೃತ್ಯುಃ ಕಸ್ಮೈ ದೇವಾಯ ಹವಿಷಾ ವಿಧೇಮ ॥**

ಈ ಮಂತ್ರದಲ್ಲಿ ಹಿರಣ್ಯಗರ್ಭನನ್ನು ಪ್ರಕಾರಾಂತರದಿಂದ ಸ್ತುತಿಮಾಡಲಾಗಿದೆ. ಈತನು ಎಲ್ಲರಿಗೂ ಆತ್ಮದನೂ ಬಲದನೂ ಆಗಿರುವನು. ಆತ್ಮದನೆಂದರೆ ಆತ್ಮನನ್ನು ಕೊಡುವವನು-ಎಂದು ಅಕ್ಷರಾರ್ಥವು. ಎಲ್ಲಾ ಜೀವಾತ್ಮರೂ ಈ ಸಮಷ್ಟ್ಯಾತ್ಮನಾದ ಹಿರಣ್ಯಗರ್ಭನಿಂದಲೇ– ಹೇಗೆ ಕೆಂಡದಿಂದ ಕಿಡಿಗಳು ಹಾರಿಬರುವವೋ ಹಾಗೆ– ಹೊರಬಂದಿರುತ್ತಾರೆ. ಆದ್ದರಿಂದ ಎಲ್ಲರಿಗೂ ಅವರವರ ಸ್ವರೂಪದಾನವನ್ನು ಮಾಡಿರುವ ಹಿರಣ್ಯಗರ್ಭನು ಆತ್ಮದನೆನಿಸಿರುತ್ತಾನೆ. ಮತ್ತು ಎಲ್ಲರಿಗೂ ಬಲವನ್ನೂ ಕೊಡುವವನಾದ್ದರಿಂದ ಬಲದನೆಂದೂ ಈತನು ಪ್ರಸಿದ್ಧನಾಗಿರುವನು. ಆತ್ಮನಿಂದಲೇ

ಎಲ್ಲರೂ ಬಲವನ್ನೂ ವೀರ್ಯವನ್ನೂ ಹೊಂದುವರೆಂದು ಬೇರೊಂದು ಶ್ರುತಿಯಲ್ಲಿದೆ. ಇನ್ನು ಈತನ ಪ್ರಶಿಷವನ್ನು ಎಂದರೆ ಪ್ರಶಾಸನವನ್ನು ಎಲ್ಲಾ ದೇವತೆಗಳೂ ಪರಿಪಾಲಿಸುವರು. ಎಲ್ಲರೂ ಇವನ ಆಜ್ಞಾಧಾರಕರಾಗಿರುವರು. ಈತನ ಸಂಕಲ್ಪಕ್ಕನುಗುಣವಾಗಿಯೇ ನಡೆದುಕೊಳ್ಳುವರು-ಎಂದಭಿಪ್ರಾಯ. ಅಮೃತವೂ ಇವನ ನೆರಳಿನಂತೆ ಇರುವದು. ಅಮೃತವೆಂದರೆ ಅಮರಣಧರ್ಮವು. ಪ್ರಜಾಪತಿಯು ಕಲ್ಪಾಯುಷ್ಯವುಳ್ಳವನಾದ್ದರಿಂದ ಅವನ ಅವಧಿಯು ಪೂರೈಸುವವರೆಗೂ ಮೃತ್ಯುವು ಸುಳಿಯಲಾರನು. ಅವಧಿಯು ಪೂರೈಸಿದಮೇಲೂ ಜ್ಞಾನದ ಬಲದಿಂದ ಅವನು ಪರಮಪದವನ್ನೇ ಸೇರಿಬಿಡುವದರಿಂದ ಮೃತ್ಯುವಿಗೆ ಅವಕಾಶವೇ ಇರುವದಿಲ್ಲ. ಹೀಗೆ ಮೃತ್ಯುವನ್ನು ದಾಟಿರುವ ಈತನು ಅಮೃತನಾಗಿರುವನು. ಇವನ ನೆರಳಿನಲ್ಲೇ ಮಿಕ್ಕ ದೇವತೆಗಳೂ ಅಮೃತರೆನಿಸಿರುವರು. ಇಂಥ ದೇವನನ್ನು ನಾವು ಹವಿಸ್ಸುಗಳಿಂದ ಆರಾಧಿಸುವೆವು- ಎಂದು ಇಲ್ಲಿ ಸ್ತುತಿಸಲಾಗಿದೆ. ಈಗ ಮೂರನೆಯ ಋಕ್ಕನ್ನು ವಿಚಾರಮಾಡೋಣ.

**ಓಂ ॥ ಯಃ ಪ್ರಾಣತೋ ನಿಮಿಷತೋ ಮಹಿತ್ವೈಕ ಇದ್ರಾಜಾ**
**ಜಗತೋ ಬಭೂವ । ಯ ಈಶೇ ಅಸ್ಯ ದ್ವಿಪದಶ್ಚತುಷ್ಪದಃ**
**ಕಸ್ಮೈ ದೇವಾಯ ಹವಿಷಾ ವಿಧೇಮ ॥**

ಈ ಮಂತ್ರದಲ್ಲಿ ಹಿರಣ್ಯಗರ್ಭನ ಮತ್ತೊಂದು ಶಕ್ತಿಯನ್ನು ಸ್ತುತಿಸಲಾಗಿದೆ. ಈತನು ತನ್ನ ಕ್ರಿಯಾಶಕ್ತಿಯಿಂದ ಜಗತ್ತಿನ ಪ್ರಾಣಿಗಳ ಉಸಿರನ್ನು ನಿಯಮನ ಮಾಡುತ್ತಿರುವನು. ಹಾಗೂ ರೆಪ್ಪೆಹೊಡೆಯುವ ಕ್ರಿಯೆಯನ್ನೂ ನಿಯಂತ್ರಣ ಮಾಡುವನು. ಹೀಗೆ ತಾನೊಬ್ಬನೇ ಜಗತ್ತಿನ ಎಲ್ಲಾ ಪ್ರಾಣಿಗಳ ಕರಣವ್ಯಾಪಾರಗಳನ್ನೂ ಪ್ರಾಣನಾದಿವ್ಯಾಪಾರಗಳನ್ನೂ ನಡೆಯಿಸುತ್ತಿರುವನಾದ್ದರಿಂದ ಜಗತ್ತಿಗೆ ರಾಜನೆನಿಸಿರುವನು. ರಾಜನೆಂದರೆ ವಿರಾಜಮಾನನಾಗಿ ಹೊಳೆಯುತ್ತಿರುವವನು- ಎಂದೂ ಅರ್ಥಮಾಡಬಹುದು. ಮತ್ತು ಈತನು ಎರಡು ಕಾಲಿನ ಹಾಗೂ ನಾಲ್ಕು ಕಾಲಿನ ಎಲ್ಲಾ ಜೀವರುಗಳನ್ನೂ ಆಳುತ್ತಿರುವನು. ನಾಲ್ಕುಕಾಲಿನವೇ ಮುಂತಾದ ಎಲ್ಲಾ ಪ್ರಾಣಿಗಳು, ಪಕ್ಷಿಗಳು, ಕ್ರಿಮಿಕೀಟಗಳಾದಿಯಾಗಿ ಜಂಗಮಪ್ರಾಣಿಗಳೆಲ್ಲವನ್ನೂ ಆಳುತ್ತಿರುವನು-ಎಂದರ್ಥ. ಹಿರಣ್ಯಗರ್ಭನು ಕ್ರಿಯಾಶಕ್ತಿಪ್ರಧಾನನಾಗಿ ವ್ಯವಹರಿಸಲ್ಪಡುವಾಗ ವಾಯು, ಸೂತ್ರಾತ್ಮ- ಎಂದೂ ಹೆಸರಿಸಲ್ಪಡುವನು. ಆಗ ಲೋಕವೆಲ್ಲವೂ ಅವನಲ್ಲಿಯೇ ಹಾಸುಹೊಕ್ಕಾಗಿ ಹೆಣೆದುಕೊಂಡಿರುವದೆಂದೂ ಶ್ರುತಿಯಲ್ಲಿ ತಿಳಿಸಿದೆ. ಇವನ ಬಲವೂ ಸಾಮರ್ಥ್ಯವೂ ಶಕ್ತಿಯೂ ಅಪಾರವಾದದ್ದು. ಇವನನ್ನೇ ವೈಷ್ಣವರು ಜೀವೋತ್ತಮನೆಂದೂ ಪ್ರಾಣದೇವರೆಂದೂ ಕರೆಯುವರು. ಒಟ್ಟಿನಲ್ಲಿ ಜ್ಞಾನಶಕ್ತಿ-ಕ್ರಿಯಾಶಕ್ತಿಗಳೆರಡೂ ಹಿರಣ್ಯಗರ್ಭನ ಶಕ್ತಿಗಳೇ ಆಗಿವೆ. ಇವುಗಳಿಂದ ಆತನು ಜಗದ್ವ್ಯಾಪಾರಗಳನ್ನು ನಿರ್ವಹಿಸುತ್ತಾನೆ. ಇಂಥ ದೇವನಿಗೆ ನಾವು ಹವಿರರ್ಪಣೆಮಾಡುವೆವು- ಎಂದಭಿಪ್ರಾಯ.

# ಗ್ರಂಥಪರಿಚಯ

೧. **ಭಾವಮತಿ :** (ಕಾವ್ಯಭಾವಮತಿಯೊಡನೆ) ಶ್ರೀ ಜಗದ್ಗುರು ಚಂದ್ರಶೇಖರ ಭಾರತೀ ಸ್ಮಾರಕ ಕಾಲೇಜಿನ ರಜತಮಹೋತ್ಸವ ಸಂಚಿಕೆ. ಪ್ರಕಾಶಕರು : ಚಂದ್ರಶೇಖರಭಾರತೀ ಸ್ಮಾರಕ ಕಾಲೇಜು, ಶೃಂಗೇರಿ. ಪುಟಗಳು : ಕ್ರೌನ್ $\frac{1}{4}$ ರ 132 + ೨0 + 28.

ಪ್ರತಿವರ್ಷವೂ ಸರ್ವಾಂಗಸುಂದರವಾಗಿ ಪ್ರಕಟವಾಗುತ್ತಿರುವ ಕಾಲೇಜು ಸಂಚಿಕೆಯಾದ ಭಾವಮತಿಯು ಉಳಿದ ಕಾಲೇಜು ಸಂಚಿಕೆಗಳಿಗಿಂತ ವಿಶಿಷ್ಟವಾಗಿದ್ದು ಎರಡು ಬಾರಿ ಮೈಸೂರು ವಿಶ್ವವಿದ್ಯಾಲಯದ ಬಹುಮಾನವನ್ನೂ ಪಡೆದಿದೆ. ಈ ಬಾರಿಗೆ ಕಾಲೇಜಿನ ರಜತಮಹೋತ್ಸವದ ವಿಶೇಷ ಸಂಚಿಕೆಯಾಗಿಯೂ ಹೊರಬಂದಿರುವದು ಸಂತೋಷದ ಸಂಗತಿಯಾಗಿದೆ. ಸಂಚಿಕೆಯ ಐವತ್ತು ಪುಟಗಳು ಭಾವಚಿತ್ರಗಳಿಗೂ ೨೨ ಪುಟಗಳು ಜಾಹಿರಾತುಗಳಿಗೂ ವಿನಿಯೋಗವಾಗಿವೆ. ಪ್ರಾರಂಭದಲ್ಲಿಯೂ ತ್ರಿವರ್ಣರಂಜಿತ ಭಾವಚಿತ್ರಗಳೂ ಇತರ ಫೋಟೋಗಳೂ ಸಂಚಿಕೆಯನ್ನಲಂಕರಿಸಿವೆ. ವಿಶಿಷ್ಟ ಮುದ್ರಣವಿನ್ಯಾಸದಿಂದ ಕೂಡಿದ ಮರೆಹಾಳೆಯು ಆಕರ್ಷಕವಾಗಿದೆ. ಸಂಚಿಕೆಯ ಶರೀರದಲ್ಲಿ ಏಳು ವಿಶೇಷ ಲೇಖನಗಳು, ೨೬ ಇತರ ಲೇಖನಗಳೂ ಇವೆ. ಒಂದೆರಡು ಲೇಖನಗಳುಳ್ಳ ಸಂಸ್ಕೃತ ಹಿಂದೀ ವಿಭಾಗವೂ ಪ್ರತ್ಯೇಕವಾಗಿ ಇಂಗ್ಲಿಷ್ ವಿಭಾಗವೂ ಇವೆ. ಕವನವಿಭಾಗವೂ ಬೇರೆಯಾಗಿ ಇದೆ. ಎಲ್ಲಾ ಲೇಖನಗಳೂ ಹಿರಿಯಮಟ್ಟದಲ್ಲಿದ್ದು ವಿಚಾರಪೂರ್ಣವಾಗಿವೆ. ವ್ಯಕ್ತಿಗಳನ್ನು ಅಧಿಕರಿಸಿ ಬರೆದಿರುವ ಲೇಖನಗಳು ಈಗಿನ ಕಿರಿಯರಿಗೆ ಆದರ್ಶವಾಗಿವೆ. ಕಾವ್ಯಭಾವಮತಿಯು ಈವರೆಗಿನ ೨೫ ವರ್ಷಗಳಲ್ಲಿ ಪ್ರಕಟವಾದ ಕವನಗಳಿಂದ ಆಯ್ದ ಕೆಲವು ಕವನಗಳ ಸಂಗ್ರಹವಾಗಿದೆ. ಎಲ್ಲಾ ಲೇಖನಗಳಲ್ಲಿಯೂ ಕವನಗಳಲ್ಲಿಯೂ ವಿದ್ಯಾರ್ಥಿಗಳ ಪ್ರತಿಭಾಶಕ್ತಿಯು ಎದ್ದು ಕಾಣುವಂತಿದೆ. ಕಾಲೇಜಿನ ಉಳಿದ ಚಟುವಟಿಕೆಗಳು, ಪುರೋಭಿವೃದ್ಧಿ, ಹಣಕಾಸು, ಕ್ರೀಡಾವರದಿಗಳೇ ಮುಂತಾದ ಎಲ್ಲಾ ವಿಷಯಗಳಿಂದ ತುಂಬಿದ ಭಾವಮತಿಯು ಕಾಲೇಜನ್ನು ಕಣ್ಣೆದುರಿಗೆ ಕಟ್ಟಿದಂತೆ ಮುಂದೆ ಇಡುತ್ತಿದಾಳೆ. ಈ ಸಂಸ್ಥೆಯು ಇತೋಪ್ಯತಿಶಯವಾದ ಪುರೋಭಿವೃದ್ಧಿಯನ್ನು ಹೊಂದಲೆಂದು ಹಾರೈಸುವೆವು.

೨. **ಶ್ರೀರಮಣಜ್ಞಾನಕೇಂದ್ರ ನಡೆಯುತ್ತಾ ಬಂದ ದಾರಿಯಲ್ಲಿನ ಮೈಲಿಕಲ್ಲುಗಳು :** ಬರೆದವರು ಮತ್ತು ಪ್ರಕಾಶಕರು : ರಾಷ್ಟ್ರಭಾಷಾವಿಶಾರದ R. S. ಗೋವಿಂದಪ್ಪಶೆಟ್ಟರು, 1148, ವ್ರಜನಿವಾಸ, ಚಾಮರಾಜಪುರಂ, ಮೈಸೂರು–4. ಪುಟಗಳು : ಡೆಮ್ಮಿ 24 + 132. **ಬೆಲೆ :** ಈ ಪುಸ್ತಕವನ್ನು ಓದದೆ ಅತ್ತ ಸರಿಸಬೇಡಿ.

ಈ ಪುಸ್ತಕವು ಮೈಸೂರಿನ ಶ್ರೀರಮಣಜ್ಞಾನಕೇಂದ್ರದ ಸಂಸ್ಥಾಪಕ ಗೌ॥ ಕಾರ್ಯದರ್ಶಿಗಳಾದ ಲೇಖಕರು ಸಂಸ್ಥೆಯ ಕಟ್ಟಡದ ರಚನೆ–ಬೆಳವಣಿಗೆಗಳಿಗಾಗಿ ವಹಿಸಿರುವ ಶ್ರಮವನ್ನೂ ಸಾರ್ವಜನಿಕರ ಪ್ರತಿಕ್ರಿಯೆಯನ್ನೂ ಒಳಗೊಂಡಿರುತ್ತದೆ. ಧರ್ಮಕಾರ್ಯಗಳನ್ನಾರಂಭಿಸುವವರಿಗೆ ಇದು ಅನುಭವರಸಾಯನದಂತಿದೆ. ಶ್ರೀರಮಣಭಕ್ತರಾದ ಲೇಖಕರು ಛಲದಿಂದ ಕೂಡಿ ಸಂಸ್ಥೆಯ ಕಟ್ಟಡವನ್ನು ಈವರೆಗೆ ಸೇಕಡ ೬೫ ಭಾಗ ಪೂರ್ಣಗೊಳಿಸಿದ್ದಾರೆ. ಮಹಾಜನರು ಉದಾರ ಸಹಾಯವನ್ನು ನೀಡಿ ಈ ಧರ್ಮಕಾರ್ಯವು ಪೂರ್ಣಗೊಳ್ಳುವಂತೆ ಸಹಕರಿಸಬೇಕಾಗಿ ಪ್ರಾರ್ಥನೆ.

# ಸೂರ್ಯಾದಿಗಳನ್ನು ಬೆಳಗುವದು ಬ್ರಹ್ಮವೇ

( ಸಂಪಾದಕ )

ಬ್ರಹ್ಮಸೂತ್ರಭಾಷ್ಯವನ್ನು ಕುರಿತು ಬರೆಯುತ್ತಿರುವ ಲೇಖನಮಾಲೆಯಲ್ಲಿ ದಹರವೆಂದರೆ ಬ್ರಹ್ಮವೇ-ಎಂಬಿದನ್ನು ಈವರೆಗಿನ ವಿಚಾರಸರಣಿಯಿಂದ ನಿರ್ಣಯಿಸಿದ್ದಾಗಿದೆ. ಈಗ ಮುಂಡಕೋಪನಿಷತ್ತಿನಲ್ಲಿರುವ 'ನ ತತ್ರ ಸೂರ್ಯೋ ಭಾತಿ' ಎಂಬ ಮಂತ್ರದಲ್ಲಿ ಬ್ರಹ್ಮವನ್ನು ಹೇಳಿದೆಯೆ ? ಅಥವಾ ಬೇರೊಂದು ತೇಜೋಧಾತುವನ್ನು ಹೇಳಿದೆಯೆ ?-ಎಂಬಿದನ್ನು ವಿಚಾರಮಾಡಲಾಗುವದು. 'ನ ತತ್ರ ಸೂರ್ಯೋ ಭಾತಿ' ಎಂಬಲ್ಲಿ ಆ ಸ್ವರೂಪವನ್ನು ಸೂರ್ಯಚಂದ್ರರು ಯಾರೂ ಬೆಳಗಲಾರರು ; ಆದರೆ ಅದರ ಬೆಳಕಿನಿಂದಲೇ ಇವೆಲ್ಲವೂ ಬೆಳಗುತ್ತಿದೆ-ಎಂದಿರುವದರಿಂದ ಸೂರ್ಯಾದಿಗಳಿಗೂ ಮಿಗಿಲಾದ ಯಾವದೋ ತೇಜೋಧಾತುವನ್ನು ಹೇಳಬೇಕೆಂದು ಕಂಡುಬರುತ್ತದೆ. ಅದು ಬ್ರಹ್ಮವೇ ಹೌದೆ, ಅಲ್ಲವೆ ? ಎಂಬಿದು ಸಂಶಯವಾಗಿದೆ. ಆದ್ದರಿಂದ ವಿಚಾರಮಾಡಬೇಕಾಯಿತು. ಪೂರ್ವಪಕ್ಷಿಯು ಹೇಳುವದೇನೆಂದರೆ : ಸೂರ್ಯಾದಿಗಳ ಜೊತೆಯಲ್ಲಿ ಪಠಿಸಿರುವದರಿಂದ ಇದು ಕೂಡ ಒಂದು ತೇಜೋಧಾತುವೇ ಆಗಿರಬೇಕು. ಏಕೆಂದರೆ ತೇಜೋಧಾತುಗಳನ್ನು ಕುರಿತೇ ಇಲ್ಲಿ ಬೆಳಗುವಿಕೆಯನ್ನು ಪ್ರತಿಷೇಧಿಸಿದೆ. ತೇಜಸ್ಸ್ವಭಾವದ ಚಂದ್ರ-ನಕ್ಷತ್ರಾದಿಗಳು ಸೂರ್ಯನು ಇರುವಾಗ ಬೆಳಗಲಾರವು. ಏಕೆಂದರೆ ಸೂರ್ಯನ ತೇಜಸ್ಸೇ ಅಧಿಕವಾಗಿರುತ್ತದೆ. ಹಾಗೆಯೇ ಸೂರ್ಯನೂ ಬೆಳಗದೆ ಇರಬೇಕಾದರೆ ಅವನಿಗಿಂತ ಮಿಗಿಲಾದ ತೇಜೋಧಾತುವು ಯಾವದೋ ಇರಬಹುದು. ಇನ್ನು 'ಅನುಭಾತಿ' ಎಂಬ ಮಾತು ಕೂಡ ತೇಜಃಸ್ವಭಾವದ ವಸ್ತುವನ್ನೇ ಪರಾಮರ್ಶಿಸುತ್ತದೆ. ಏಕೆಂದರೆ ಸಮಾನವಾದ ಸ್ವಭಾವವುಳ್ಳ ವಸ್ತುಗಳಲ್ಲಿಯೇ ಅನುಸರಿಸಿ ಬೆಳಗುವದೆಂಬುದು ಕಂಡುಬರುತ್ತದೆ. ಉದಾಹರಣೆಗೆ ಹೋಗುವವನನ್ನು ಅನುಸರಿಸಿ ಹೋಗುತ್ತಾನೆ-ಎಂಬಲ್ಲಿ ಇಬ್ಬರೂ ನಡೆಯುವ ಸ್ವಭಾವದವರಾಗಿರುವದು ಪ್ರಸಿದ್ಧವಷ್ಟೆ. ಹಾಗೆಯೇ ಇಲ್ಲಿಯೂ ತಿಳಿಯಬೇಕು. ಆದ್ದರಿಂದ ಮೇಲ್ಕಂಡ ಮಂತ್ರದಲ್ಲಿ ಯಾವದೋ ತೇಜೋಧಾತುವನ್ನು ಹೇಳಿದೆ-ಎಂದೇಕಾಗಬಾರದು ? ಎಂಬಿದು ಪೂರ್ವಪಕ್ಷಿಯ ಅಭಿಪ್ರಾಯ.

ಇಲ್ಲಿ ಸಿದ್ಧಾಂತವೇನೆಂದರೆ : ಬಾದರಾಯಣರ ಸೂತ್ರವು ಹೀಗಿದೆ :- 'ಅನುಕೃತೇಸ್ತಸ್ಯ ಚ' (ಅನುಕೃತಿಯಿಂದಲೂ ಅದರ ಬೆಳಕಿನಿಂದ ಬೆಳಗುವದರಿಂದಲೂ ಪರಮಾತ್ಮನೇ) ಎಂದರ್ಥ. ಇಲ್ಲಿ ಪರಮಾತ್ಮನನ್ನೇ ಹೇಳಿದೆ ಎಂಬಿದು ಯುಕ್ತವು. ಏಕೆಂದರೆ ಅನುಕೃತಿಯಿರುವದರಿಂದ. ಅನುಕೃತಿ ಎಂದರೆ ಅನುಸರಿಸುವದು. 'ಅವನು ಬೆಳಗುವದನ್ನು ಅನುಸರಿಸಿ ಎಲ್ಲವೂ ಬೆಳಗುತ್ತದೆ' ಎಂಬುದಿದೆಯಲ್ಲ, ಇದು ಪರಮಾತ್ಮನನ್ನು ತೆಗೆದುಕೊಂಡರೆ ಸರಿಹೋಗುತ್ತದೆ. ಬೇರೊಂದು ಶ್ರುತಿಯಲ್ಲಿ ಆತ್ಮನು ಭಾರೂಪನು ಎಂದು ಹೇಳಿಯೂ ಇದೆ. ಅಲ್ಲದೆ ತೇಜೋಧಾತುಗಳು ಒಂದಕ್ಕೊಂದು ಸಮವಾಗಿರುವದರಿಂದ ಒಂದಕ್ಕೆ ಮತ್ತೊಂದು ತೇಜೋಧಾತುವಿನ ಬಯಕೆ

ಇರುವದಿಲ್ಲ. ಒಂದು ದೊಡ್ಡ ದೀಪವು ಮತ್ತೊಂದು ದೊಡ್ಡ ದೀಪವನ್ನನುಸರಿಸಿ ಬೆಳಗುವದಿಲ್ಲವಷ್ಟೆ. ಇನ್ನು ಒಂದೇ ಸ್ವಭಾವದ ವಸ್ತುಗಳಲ್ಲಿಯೇ ಒಂದು ಮತ್ತೊಂದನ್ನು ಅನುಸರಿಸುವದು ಕಂಡಿದೆ ಎಂದು ಪೂರ್ವಪಕ್ಷದಲ್ಲಿ ಹೇಳಿತ್ತಷ್ಟೆ. ಇದೇನೂ ಗೊತ್ತಾದ ನಿಯಮವಲ್ಲ. ಏಕೆಂದರೆ ಬೇರೆಬೇರೆಯ ಸ್ವಭಾವದ ವಸ್ತುಗಳಲ್ಲಿ ಅನುಕಾರವಿರುವದು ಕಂಡುಬಂದಿದೆ. ಹೇಗೆಂದರೆ ಚೆನ್ನಾಗಿ ಕಾಯಿಸಿದ ಕಬ್ಬಿಣದ ತುಂಡು ಬೆಂಕಿಯನ್ನು ಅನುಕರಿಸುತ್ತದೆ. ಬೆಂಕಿಯು ಸುಡುವದನ್ನು ಅನುಸರಿಸಿ ತಾನೂ ಸುಡುತ್ತದೆ. ಆದ್ದರಿಂದ ಸೂತ್ರದಲ್ಲಿರುವ 'ಅನುಕೃತೇಃ' ಎಂಬಿದು ಬೆಳಗುವದನ್ನೂ 'ತಸ್ಯ ಚ' ಎಂಬಿದು 'ತಸ್ಯ ಭಾಸಾ ಸರ್ವಮಿದಂ ವಿಭಾತಿ' ಎಂಬಶ್ರುತಿವಾಕ್ಯವನ್ನೂ ಸೂಚಿಸುತ್ತದೆ- ಎಂದು ತಿಳಿಯಬೇಕು.

ಇನ್ನು ಮಂತ್ರದಲ್ಲಿರುವ 'ಸರ್ವಮಿದಂ' ಎಂಬ ಶಬ್ದವು ಕೇವಲ ಸೂರ್ಯಾದಿಗಳ ಬೆಳಕನ್ನು ಮಾತ್ರ ಪರಾಮರ್ಶಿಸದೆ ನಾಮರೂಪಕರ್ಮಾತ್ಮಕವಾದ ಜಗತ್ತೆಲ್ಲವನ್ನೂ ಪರಾಮರ್ಶಿಸುವದರಿಂದ ಇವೆಲ್ಲವೂ ಬ್ರಹ್ಮಜ್ಯೋತಿಯ ಅವಲಂಬನೆಯಿಂದಲೇ ಬೆಳಗುತ್ತಿವೆ-ಎಂದು ಅಭಿಪ್ರಾಯವಾಗುತ್ತದೆ. ತತ್ರ ಎಂಬ ಶಬ್ದವು ಪ್ರಕೃತಪರಾಮರ್ಶಿಯಾದ್ದರಿಂದ ಈ ಮಂತ್ರದಲ್ಲಿ ಬ್ರಹ್ಮವನ್ನೇ ಸ್ವೀಕರಿಸಿರುವದು ಗೊತ್ತಾಗುತ್ತದೆ. ಇದಕ್ಕೆ ಪೂರಕವಾಗಿ ಈ ಪ್ರಕರಣದಲ್ಲಿರುವ ಉಳಿದ ಮಂತ್ರಗಳಲ್ಲಿ ಬ್ರಹ್ಮಪ್ರತಿಪಾದನೆಯಿದೆ. ಹೇಗೆಂದರೆ : 'ಯಸ್ಮಿನ್ ದ್ಯೌಃ' ಎಂಬ ಮಂತ್ರವೂ 'ಹಿರಣ್ಮಯೇ ಪರೇ ಕೋಶೇ' ಎಂಬ ಮಂತ್ರವೂ ಜ್ಯೋತಿಗಳಿಗೆಲ್ಲ ಜ್ಯೋತಿಯಾದ ಬ್ರಹ್ಮವನ್ನು ತಾತ್ಪರ್ಯದಿಂದ ಹೇಳುತ್ತಿವೆ. ಬ್ರಹ್ಮವು ಜ್ಯೋತಿಗಳಿಗೆಲ್ಲ ಜ್ಯೋತಿಯು ಹೇಗೆ ? ಎಂಬುದಕ್ಕೆ ಉತ್ತರವಾಗಿ "ನ ತತ್ರ ಸೂರ್ಯೋ ಭಾತಿ" ಎಂಬ ಮಂತ್ರವು ಬಂದಿದೆ. ಆದ್ದರಿಂದ ಇಲ್ಲಿ ಬ್ರಹ್ಮವನ್ನೇ ಹೇಳಿದೆಯೇ ಹೊರತು ಬೇರೆ ತೇಜೋಧಾತುವಿನ ವಿಚಾರವೇ ಇರುವದಿಲ್ಲ. ಬ್ರಹ್ಮದ ವಿಷಯದಲ್ಲಿ ಸೂರ್ಯಾದಿಗಳು ಬೆಳಗುವದಿಲ್ಲ-ಎಂಬಿದು ಯುಕ್ತವೂ ಆಗಿದೆ. ಏಕೆಂದರೆ ಯಾವಯಾವದು ಹೊಳೆಯುತ್ತದೆಯೋ ಅದೆಲ್ಲವೂ ಬ್ರಹ್ಮವೆಂಬ ಜ್ಯೋತಿಯಿಂದಲೇ ತೋರಿಬರುತ್ತದೆ. ಬ್ರಹ್ಮವು ಮಾತ್ರ ತನ್ನ ತೋರಿಕೆಗೆ ಮತ್ತೊಂದು ಬೆಳಕನ್ನು ಬಯಸುವದಿಲ್ಲ.

ಇನ್ನು ಭಗವದ್ಗೀತೆಯಲ್ಲಿ ಪರಮಾತ್ಮನಿಗೇ ಇಂಥ ಜ್ಯೋತಿಃಸ್ವಭಾವವನ್ನು ಹೇಳಿರುವದೂ ಕಂಡುಬರುತ್ತದೆ. 'ನ ತದ್ಭಾಸಯತೇ....' ಎಂಬ ಶ್ಲೋಕದಲ್ಲಿಯೂ "ಯದಾದಿತ್ಯಗತಂ ತೇಜಃ" ಎಂಬಲ್ಲಿಯೂ ಪರಬ್ರಹ್ಮದ ಜ್ಯೋತಿಃಸ್ವಭಾವವನ್ನು ವರ್ಣಿಸಲಾಗಿದೆ. ಹೀಗೆ ಸ್ಮೃತಿಯೂ ತೇಜೋಧಾತುವೆಂದರೆ ಪರಬ್ರಹ್ಮವೇ ಎಂಬಿದನ್ನು ಸ್ಪಷ್ಟಗೊಳಿಸುತ್ತದೆ- ಎಂಬ ವಿಷಯವನ್ನು ಬಾದರಾಯಣರು 'ಅಪಿ ಚ ಸ್ಮರ್ಯತೇ" ಎಂಬ ಸೂತ್ರದಲ್ಲಿ ತಿಳಿಸಿದ್ದಾರೆ. ಇಲ್ಲಿಗೆ ಅನುಕೃತ್ಯಧಿಕರಣವು ಮುಗಿದಿದೆ.

———

# ವೇದಾಂತಸಪ್ತಾಹಮಹೋತ್ಸವ-೩

(ವರದಿಗಾರರು : ಹೆಚ್.ಎಸ್. ಲಕ್ಷ್ಮೀನರಸಿಂಹಮೂರ್ತಿ)

ತಾ|| 28-7-90 ನೇ ಶನಿವಾರ ಸಂಜೆ ವೇ|| ಲಕ್ಷ್ಮೀನರಸಿಂಹಮೂರ್ತಿಗಳು 'ನಾನು ಕಂಡ ಶ್ರೀಗಳವರು' ಎಂಬ ವಿಷಯದಲ್ಲಿ ಉಪನ್ಯಾಸಮಾಡಿದರು. ಸಾರಾಂಶವು ಹೀಗಿದೆ : 'ನಾನು 1947 ನೇ ವರ್ಷದಲ್ಲಿ ವಿದ್ಯಾರ್ಥಿಯಾಗಿ ಶ್ರೀಗಳವರ ಬಳಿಗೆ ಬಂದೆನು. ಆಗ ಅವರಿನ್ನೂ ಸಂನ್ಯಾಸಿಗಳಾಗಿರಲಿಲ್ಲ. ಆದರೆ ಸಂನ್ಯಾಸಿಗಳಿಗಿಂತ ಮಿಗಿಲಾದ ಆಚಾರವಿಚಾರಗಳನ್ನು ಪರಿಪಾಲಿಸುತ್ತಿದ್ದರು. ಅವರು ತಮ್ಮ ೩೮ನೆಯ ವಯಸ್ಸಿನಲ್ಲೇ ಪತ್ನೀವಿಯೋಗವಾದ ಕಾಲದಿಂದ ಏಕಭುಕ್ತವ್ರತವನ್ನು ಪರಿಪಾಲಿಸಿದ್ದರು. 1948 ರಲ್ಲಿ ಸಂನ್ಯಾಸಿಗಳಾದಮೇಲೆ ಯಮನಿಯಮಗಳಲ್ಲಿ ಇನ್ನೂ ಹೆಚ್ಚಿನ ಅಂತಸ್ತನ್ನು ತಲುಪಿದರು. ತ್ರಿಕಾಲಸ್ನಾನ, ಬೆಳಗಿನ ವೇಳೆ ಭಿಕ್ಷೆ ಪೂರೈಸುವವರೆಗೂ ಮೌನ, ಇತರರೊಡನೆ ಸಂಭಾಷಣೆ ಮಾಡದಿರುವದು, ಪಾಠಗಳನ್ನು ಮಾತ್ರ ನಡೆಸುವದು, ಸಂಸ್ಕೃತಗ್ರಂಥಗಳ ಬರವಣಿಗೆಯನ್ನು ನಿರ್ವಹಿಸುವದು-ಹೀಗೆ ದಿನಚರಿಯನ್ನು ಇಟ್ಟುಕೊಂಡಿದ್ದರು. ಕನ್ನಡ ಬರವಣಿಗೆ, ಪ್ರೂಫ್‌ರೀಡಿಂಗ್, ಸಾಧಕರಿಗೆ ಉಪದೇಶ, ವ್ಯಾವಹಾರಿಕ ಮಾತುಕತೆಗಳು-ಇವುಗಳನ್ನು ಮಧ್ಯಾಹ್ನದಮೇಲೆ ಮಾಡುತ್ತಿದ್ದರು. ಸೂರ್ಯನ ಬೆಳಕು ಇದ್ದಾಗಲೆಲ್ಲ ಬರವಣಿಗೆ, ರಾತ್ರಿ ಗ್ರಂಥಗಳ ಅಧ್ಯಯನ-ಇದು ಅವರ ಪದ್ಧತಿಯಾಗಿತ್ತು. ನಾನು ವಿದ್ಯಾರ್ಥಿಯಾಗಿ ಸೇರಿದಾಗ ಬಹಳ ಪ್ರೇಮಾದರಗಳಿಂದ ವೇದಾಂತಪಾಠಗಳನ್ನು ನಡೆಸುತ್ತಿದ್ದರು. ರಾತ್ರಿ ವೇಳೆ ಪಾಠಗಳನ್ನು ಚಿಂತನೆ ಮಾಡಿಸುತ್ತಿದ್ದರು. ಕಾರ್ಯಾಲಯದಲ್ಲಿ ಭಿಕ್ಷೆಗೆ ಸೌಕರ್ಯವಿದ್ದರೂ ಸಂಸ್ಥೆಯ ಖರ್ಚಿನಿಂದ ಭಿಕ್ಷೆ ಸ್ವೀಕರಿಸುತ್ತಿರಲಿಲ್ಲ. ಹೊಳೆನರಸೀಪುರದಲ್ಲಿ ಆಗಿನ ಕಾಲಕ್ಕೆ ಪ್ರತಿಷ್ಠಿತರಾಗಿದ್ದ ಆಚಾರವಿಚಾರವಂತರಾದ ಸದ್ಗೃಹಸ್ಥರ ಮನೆಗಳಿಂದ ವಾರಪದ್ಧತಿಯನ್ನು ಅನುಸರಿಸಿ ಭಿಕ್ಷೆ ಸ್ವೀಕರಿಸುತ್ತಿದ್ದರು. ಯಾರೋ ಒಬ್ಬರು ಕಾರ್ಯಾಲಯದಲ್ಲೇ ಪ್ರತಿದಿನವೂ ಭಿಕ್ಷೆಗೆ ಏರ್ಪಾಡು ಮಾಡಿಕೊಳ್ಳಬಾರದೇಕೆ ? ಎಂದು ಕೇಳಲಾಗಿ 'ಹಾಗಲ್ಲ, ನಾನು ವಯಸ್ಸನಾಗಿರುವದರಿಂದ (68ವಯಸ್ಸು) ಭಿಕ್ಷೆಗೆ ತಿರುಗಾಡಲಾರೆ; ಸಂನ್ಯಾಸಿಯ ಧರ್ಮದಂತೆ ಒಂದೇ ಕಡೆ ಇರಬಾರದು. ಆದರೆ ಸಂಸ್ಥೆಯ ಬೆಳವಣಿಗೆಗಾಗಿ ಒಂದೇ ಸ್ಥಳದಲ್ಲಿರಬೇಕಾಗಿದೆ. ಇನ್ನು ಪ್ರತಿದಿನವೂ ಸಂಸ್ಥೆಯಿಂದಲೇ ಭಿಕ್ಷೆ ಏರ್ಪಾಡಾದರೆ 'ನಾನು ಸಂನ್ಯಾಸಿ' ಎಂಬಿದೇ ಮರೆತುಹೋಗುತ್ತದೆ. ಹಾಗಾಗದೆ ಇರಲಿ-ಎಂಬ ಕಾರಣದಿಂದ ಪ್ರತಿದಿನವೂ ಭಕ್ತರು ಬಂದು ಭಿಕ್ಷಾವಂದನೆ ಮಾಡಿದರೆ 'ಆಹಾ ! ನಾನು ಸಂನ್ಯಾಸಿ- ಎಂದಿಷ್ಟಾದರೂ ನೆನಪಾಗುತ್ತೆ. ಇದೇ ಸರಿ' ಎಂದು ಉತ್ತರಿಸಿದರು. ಹೀಗೆ ಶ್ರೀಗಳವರು, ಮಡಿ, ಆಚಾರ, ಸಂನ್ಯಾಸಧರ್ಮಪರಿಪಾಲನೆ, ವೇದಾಂತಚಿಂತನೆ, ವೇದಾಂತಪ್ರವಚನ, ಲೇಖನ-ಮುಂತಾದ ಆದರ್ಶಗಳಿಂದ ನಿಜವಾದ ಪರಮಹಂಸಪರಿವ್ರಾಜಕರೂ ಸಂಯಮೀಂದ್ರರೂ ಆಗಿದ್ದರು. ಅವರು ಶರಟು ಹಾಕಿದ್ದವರನ್ನು ನೋಡಲು ಸಹ ಹಿಂಜರಿಯುತ್ತಿದ್ದರು. ಇದರಿಂದ ನಾನೂ ಸಹ ಶರಟು ಹಾಕುವದನ್ನೇ ಬಿಟ್ಟೆನು' ಎಂದು ತಿಳಿಸಿದರು.

ಅನಂತರ ಶ್ರೀ ಬಿ. ಎಸ್. ಕೃಷ್ಣಮೂರ್ತಿಯವರು "ಶ್ರೀಶ್ರೀಗಳವರ ತ್ಯಾಗ ಹಾಗೂ ಸಾಹಸ" ಎಂಬ ವಿಷಯ ದಲ್ಲಿ ಪ್ರವಚನಮಾಡಿದರು. ಅದರ ಸಾರಾಂಶವು ಹೀಗಿದೆ :- "ನಾನು ಶ್ರೀಗಳವರನ್ನು ಸಾಕ್ಷಾತ್ತಾಗಿ ಕಂಡವನಲ್ಲ. ಆದರೆ ಅವರ ಅನುಯಾಯಿಗಳು ಆಗಾಗ್ಗೆ ತಿಳಿಸಿದ ಕೆಲವು ವಿಷಯಗಳನ್ನೂ ಅವರ ಚರಿತ್ರೆಯಲ್ಲಿ ಕಂಡುಬಂದ ವಿಚಾರಗಳನ್ನೂ ಆಧಾರವಾಗಿಟ್ಟುಕೊಂಡು ಕೆಲವು ವಿಷಯಗಳನ್ನು ಪ್ರಸ್ತಾಪಿಸುವೆನು. ಮುಖ್ಯವಾಗಿ ಶ್ರೀಗಳು ತಮ್ಮ ತನುಮನಧನಗಳೆಲ್ಲವನ್ನೂ ಅಧ್ಯಾತ್ಮಸೇವೆಗೇ ವಿನಿಯೋಗಿಸಿದವರಾಗಿದ್ದರು. ಅವರು ತಮ್ಮ ಪಿತ್ರಾರ್ಜಿತ ಆಸ್ತಿಯನ್ನು ಸಂಸ್ಥೆಯ ಪುರೋಭಿವೃದ್ಧಿಗಾಗಿ ಸಮರ್ಪಿಸಿದರು. ತಮ್ಮ ಮಗನಿಗೆ ಸ್ವಯಾರ್ಜಿತ ಆಸ್ತಿಯನ್ನು ಬಿಟ್ಟುಕೊಟ್ಟಿದ್ದರು. ಪ್ರಾರಂಭದಿಂದಲೂ ಅಧ್ಯಾತ್ಮಗ್ರಂಥಗಳ ಲೇಖನ ಪ್ರಕಾಶನಗಳು ಲಾಭಕರವಲ್ಲವೆಂದು ತಿಳಿದಿದ್ದರೂ ತಮ್ಮ ಆತ್ಮಸಂತೋಷ ಹಾಗೂ ಜನಕಲ್ಯಾಣಕ್ಕಾಗಿ ವೇದಾಂತಗ್ರಂಥಗಳ ಮುದ್ರಣಪ್ರಚಾರಗಳನ್ನೇ ಕೈಗೊಂಡರು. ಅದಕ್ಕಾಗಿ ಸಂಸ್ಥೆಯನ್ನು ಸ್ಥಾಪಿಸಿ ಸುಮಾರು ೨೫ ವರ್ಷಗಳ ಕಾಲ ತಮ್ಮ ಮನೆಯಲ್ಲೇ ಏಕಾಂಗಿಯಾಗಿ ಸಂಸ್ಥೆಯ ಕೆಲಸಗಳನ್ನು ನಿರ್ವಹಿಸಿದ್ದಲ್ಲದೆ ತಮ್ಮ ಏಕಮಾತ್ರ ಪುತ್ರನನ್ನು ಇದೇ ಕಾರ್ಯದಲ್ಲಿ ನಿಯೋಜಿಸಿದರು. ಆರ್ಥಿಕವಾಗಿ ಹೆಚ್ಚಿನ ಪ್ರೋತ್ಸಾಹವು ಈ ಅಧ್ಯಾತ್ಮ ಪ್ರಸಾರಕಾರ್ಯಕ್ಕೆ ದೊರಕದೆ ಇದ್ದಾಗಲೂ ಹಿಮ್ಮೆಟ್ಟಲಿಲ್ಲ. ಇನ್ನು ಅಧ್ಯಾತ್ಮವಿದ್ಯಾಪ್ರಚಾರಕ್ಕಾಗಿ ಅವರು ಕಟಿಬದ್ಧರಾದಾಗ ಕೆಲವು ಸಂಪ್ರದಾಯಸ್ಥರು ವಿರೋಧಿಸಿದರು. ಅವರ ಗ್ರಂಥಗಳು ಸಂಪ್ರದಾಯ ಬಾಹಿರವೆಂದು ಹಳಿದರು. ತರ್ಕಮೀಮಾಂಸಾದಿಶಾಸ್ತ್ರಪರಿಚಯವಿಲ್ಲದ ಇವರ ವೇದಾಂತ ವ್ಯಾಖ್ಯಾನವು ಜಳ್ಳೆಂದು ಕೆಲವರು ಜರಿದರು. ಬ್ರಾಹ್ಮಣೇತರರಿಗೂ ಭಾಷ್ಯಗಳನ್ನು ಪ್ರವಚನಮಾಡುತ್ತಾರೆಂಬ ಕಾರಣದಿಂದ ಅಸಹಕಾರವನ್ನು ತೋರಿಸಿದರು. ಆದರೆ ಶ್ರೀಗಳವರು ಇವುಗಳಾವುದಕ್ಕೂ ಜಗ್ಗಲಿಲ್ಲ. ಪಾಶ್ಚಾತ್ತ್ಯರು ವೇದಗಳನ್ನೇ ಆಂಗ್ಲ ಭಾಷೆಗೆ ಭಾಷಾಂತರ ಮಾಡಿ ವೇದಭಾಷ್ಯಗಳನ್ನೆಲ್ಲ ಅಧ್ಯಯನ ಮಾಡಿರುವಲ್ಲಿ ಹಿಂದೂಗಳಾದ ಭಾರತೀಯರಾದ ನಾವು ನಮ್ಮ ದೇಶದ ನಿಧಿಯಾದ ಆಧ್ಯಾತ್ಮವಿದ್ಯೆಯನ್ನು ಅರಿತುಕೊಳ್ಳಲು ಅಡ್ಡಿಪಡಿಸುವದು ಸರಿಯಲ್ಲವೆಂದೂ ಆಸಕ್ತರಿಗೂ ಮುಮುಕ್ಷುಗಳಿಗೂ ಆಧ್ಯಾತ್ಮವಿಚಾರಗಳು ಅವರವರ ದೇಶಭಾಷೆಯಲ್ಲೇ ಗ್ರಂಥಗಳ ಹಾಗೂ ಉಪನ್ಯಾಸಗಳ ರೂಪದಲ್ಲಿ ದೊರಕಬೇಕೆಂದೂ ಹಠಮಾಡಿ ಶಂಕರಸಪ್ತಾಹ, ವೇದಾಂತಸಪ್ತಾಹವೇ ಮುಂತಾದ ಉತ್ಸವಗಳ ಮೂಲಕ ಅಧ್ಯಾತ್ಮವಿದ್ಯೆಯನ್ನು ಎಲ್ಲೆಲ್ಲಿಯೂ ಹರಡಿದರು. ಗ್ರಂಥವನ್ನು ರಚಿಸುವದರಿಂದಾರಂಭಿಸಿ ಮುದ್ರಣ ಪ್ರಕಾಶನ-ರವಾನೆವರೆಗಿನ ಎಲ್ಲಾ ಕೆಲಸಗಳನ್ನೂ ಸ್ವತಃಮಾಡಿ ತಮ್ಮ ಸಾಹಸವನ್ನು ಪ್ರದರ್ಶಿಸಿದರು. ಈ ಕಾರ್ಯಗಳ ನಿರ್ವಹಣೆಗಾಗಿ ಮುದ್ರಣಾಲಯವನ್ನೂ ಸ್ಥಾಪಿಸಿ ನಡೆಯಿಸಿದರು. ಹೀಗೆ ಅಸಹಾಯಶೂರರಾದ ಶ್ರೀಗಳು ತಮ್ಮ ಉದ್ದೇಶಸಾಧನೆಗಾಗಿ ಯಾರನ್ನೂ ಬೇಡದೆ ಯದೃಚ್ಛಾಲಾಭಸಂತುಷ್ಟರಾಗಿ ಅಧ್ಯಾತ್ಮಸೇವೆಯನ್ನು ಮಾಡಿದರು" ಎಂದು ತಿಳಿಸಿದರು.

ಕೊನೆಯದಾಗಿ ಅಧ್ಯಕ್ಷಪೀಠದಿಂದ ಶ್ರೀ ದೇವರಾಯಕುಲಕರಣಿಯವರು "ಶಾಂಕರದರ್ಶನದ ಸಾರ್ವತ್ರಿಕತೆ" ಎಂಬ ವಿಚಾರವಾಗಿ ಪ್ರವಚನಮಾಡಿದರು. ಅದರ ಸಾರಾಂಶವು ಹೀಗಿದೆ :– "ದರ್ಶನಗಳು ಋಷಿಮುನಿಗಳಿಂದ ಕಂಡುಕೊಂಡ ತತ್ತ್ವಗಳ ವ್ಯಾಖ್ಯಾನಗಳಾದರೂ ವೇದಾಂತವನ್ನು ಬಿಟ್ಟರೆ ಉಳಿದ ಯಾವ ದರ್ಶನವೂ ಸಾರ್ವತ್ರಿಕವಾಗಿಲ್ಲ. ಹೇಗೆಂದರೆ : ಕಪಿಲರು ಹೇಳಿದ್ದನ್ನು ಕಣಾದರು ಒಪ್ಪುವದಿಲ್ಲ. ಹಾಗೆಯೇ ಪತಂಜಲಿಗಳು ಹೇಳಿದ್ದನ್ನು ಜೈಮಿನಿಗಳು ಒಪ್ಪುವದಿಲ್ಲ. ಆದ್ದರಿಂದಲೇ ದರ್ಶನಗಳ ಸಂಖ್ಯೆ ಬೆಳೆದಿದೆ. ಇದಕ್ಕೆ ಕಾರಣವೇನೆಂದರೆ ಆಯಾ ಮಹಾತ್ಮರು ತಮಗೆ ಕಂಡುಬಂದದ್ದನ್ನು ನಿಜವೆಂದು ಅಂಗೀಕರಿಸಿದರೇಹೊರತು ಈ ದರ್ಶನವು ಸಾರ್ವತ್ರಿಕವಾಗಿ ಎಲ್ಲರಿಗೂ ಅನ್ವಯವಾಗುತ್ತದೆಯೆ ? ಎಂಬ ಬಗ್ಗೆ ಯೋಚಿಸಲೇ ಇಲ್ಲ. ಔಪನಿಷದದರ್ಶನವು ಇಂಥದ್ದಲ್ಲ. ಮತ್ತು ಇದನ್ನು ಕರಾರುವಾಕ್ಕಾಗಿ ಅರ್ಥಮಾಡಿ ಅನುಭವದಿಂದ ಸಮನ್ವಯವನ್ನು ಸಾಧಿಸಿಕೊಂಡ ಶ್ರೀ ಶಂಕರಾಚಾರ್ಯರ ದರ್ಶನವೂ ಎಂದಿಗೂ ವೈಯಕ್ತಿಕವಲ್ಲ. ಉದಾಹರಣೆಗೆ 'ಕಪ್ಪೆಯ ಚಿಪ್ಪು ಬೆಳ್ಳಿಯಂತೆ ತೋರುತ್ತದೆ' ಎಂದು ಹೇಳಿದರೆ ಯಾರಿಗಾದರೂ ಇದು ಅನುಭವವಿರುದ್ಧವೆನಿಸುವದೇ ಇಲ್ಲ. ಏಕೆಂದರೆ ಇಂಥ ಭ್ರಾಂತಿಯು ಸಮಯಾನುಸಾರ ಎಲ್ಲರಿಗೂ ಆಗಿಯೇ ಆಗುತ್ತದೆ. ಇದೇ ಸಾರ್ವತ್ರಿಕತೆಯು ಗುಟ್ಟಾಗಿದೆ. ಇದರ ಬದಲು 'ವೈಕುಂಠದಲ್ಲೋ ಕೈಲಾಸದಲ್ಲೋ ದೇವರಿದ್ದಾನೆ' ಎಂದರೆ ಇದು ಎಲ್ಲರಿಗೂ ಸಮಾನವಾಗಿ ಅನುಭವವೇದ್ಯವಾಗಲಾರದು. ಆದ್ದರಿಂದ ಶ್ರೀ ಶಂಕರಾಚಾರ್ಯರು ತಮ್ಮ ವೇದಾಂತವಿಚಾರಸರಣಿಯಲ್ಲಿ ಅನುಭವಗಮ್ಯವೂ ಸಾರ್ವತ್ರಿಕವೂ ಆದ ವಾದಸರಣಿಯನ್ನೇ ಬಳಸಿ ತತ್ತ್ವನಿರ್ಧಾರಣೆಯನ್ನು ಮಾಡಿ "ಅಹುದಾದರೆ ಅಹುದೆನ್ನಿ; ಇಲ್ಲವಾದರೆ ಇಲ್ಲವೆನ್ನಿ" ಎಂದು ಸಾರ್ವಜನಿಕರಿಗೇ ತೀರ್ಮಾನವನ್ನು ಬಿಟ್ಟುಕೊಟ್ಟಿರುತ್ತಾರೆ. ಯಾರಮೇಲೂ ಅವರು ಯಾವ ಸಿದ್ಧಾಂತವನ್ನೂ ಹೇರುವದಿಲ್ಲ. ಇಂಥ ಪ್ರಮೇಯಗಳನ್ನು ಒಪ್ಪಬೇಕೆಂದು ಬಲಾತ್ಕಾರಮಾಡುವದಿಲ್ಲ. ಮೂಢನಂಬಿಕೆಗಳಿಗೆ ಜನರನ್ನು ತಳ್ಳುವದಿಲ್ಲ. ವಿಚಾರವಂತರು ಯಾರುಬೇಕಾದರೂ ದೇಶ, ಕಾಲ, ವ್ಯಕ್ತಿ ಭೇದವಿಲ್ಲದೆ ಇರತಕ್ಕ ನಿಜವನ್ನು ಪರೀಕ್ಷಿಸಿ ನೀವೇ ನಿಮ್ಮಲ್ಲೇ ಕಂಡುಕೊಳ್ಳಬಹುದು–ಎಂದು ಸಾರಿರುತ್ತಾರೆ. ಅವರ ಉಪದೇಶಗಳು ತ್ರಿಕಾಲಾಬಾಧಿತವಾಗಿವೆ. ಸಾರ್ವತ್ರಿಕವಾಗಿವೆ. ಸರ್ವಸಂಮತವಾಗಿವೆ. ಈಗಲೇ ಇಲ್ಲಿಯೇ ಅನುಭವಕ್ಕೆ ಬರುವಂಥವಾಗಿವೆ. ಅವಿವಾದವೂ ಅವಿರುದ್ಧವೂ ಆಗಿವೆ. ಆದರೆ ಗಹನವಾಗಿವೆ, ರಹಸ್ಯವಾಗಿವೆ. ಈ ಕಾರಣಗಳಿಂದ ಶಂಕರರ ಉಪದೇಶಗಳನ್ನು ನಾಗರಿಕಪ್ರಪಂಚದಲ್ಲಿರುವ ಪ್ರಾಜ್ಞರೆಲ್ಲ ಆದರಿಸುತ್ತಾರೆ. ಗೌರವಿಸುತ್ತಾರೆ. ದೇಶವಿದೇಶಗಳಲ್ಲೆಲ್ಲ ಭಾರತೀಯ ತತ್ತ್ವಶಾಸ್ತ್ರವೆಂದರೆ ಶಂಕರವೇದಾಂತವೆಂದೇ ಪ್ರಸಿದ್ಧವಾಗಿದೆ. ಇಂಥ ಶಾಂಕರಸಮ್ಯಗ್ದರ್ಶನವನ್ನು ಚೆನ್ನಾಗಿ ಅಧ್ಯಯನಮಾಡಿ ಅದರ ಸಾರ್ವತ್ರಿಕತೆಯನ್ನು ಮನಗಾಣಬೇಕು" ಎಂದು ತಿಳಿಸಿದರು.

---

# ಸ್ವಂತ ಮನೆ

( ಶ್ರೀ ದೇವರಾಯ ಕುಲಕರಣಿ, ಬೆಂಗಳೂರು )*

ಬೆಂಗಳೂರಿನಂಥ ದೊಡ್ಡ ನಗರಗಳಿಗೆ ಜೀವನೋಪಾಯಕ್ಕಾಗಿ ಹೊರಗಿನಿಂದ ಬಂದು ನೆಲಸುವವರು ಮೊದಲು ಬಾಡಿಗೆಮನೆಯಲ್ಲಿರಬೇಕಾಗುವದು. ಆಗ ಪ್ರತಿ ತಿಂಗಳೂ ತಪ್ಪದೆ ಬಾಡಿಗೆಯನ್ನು ಪಾವತಿಮಾಡುವದು, ಯಜಮಾನನು ಕೇಳಿದಷ್ಟು ಮುಂಗಡವನ್ನು ಕೊಟ್ಟಿರುವದು, ಮನೆಯಲ್ಲಿನ ಅನಾನುಕೂಲಗಳನ್ನು ಸಹಿಸಿಕೊಂಡಿರುವದು, ಯಜಮಾನನು ಖಾಲಿಮಾಡೆಂದಾಗ ಬಿಟ್ಟು ಹೊರಡುವದು-ಇವು ಅನಿವಾರ್ಯವಾಗಿರುತ್ತವೆ. ಮನೆಯನ್ನು ಬಿಡಲು ತಕರಾರು ಮಾಡಿದರೆ ನ್ಯಾಯಾಲಯದ ಆಜ್ಞೆಯಂತೆ ಹೊರಹಾಕಿಸಿಕೊಳ್ಳಲೂಬೇಕಾದೀತು. ಏನೇ ಆದರೂ ಬಾಡಿಗೆಯುದಾರನು ಎಚ್ಚರವಾಗಿರಬೇಕು. ದೈವಾನುಗ್ರಹದಿಂದ ಒಂದು ಸ್ವಂತ ಮನೆಯನ್ನು ಮಾಡಿಕೊಂಡನಾದರೆ ಅದೊಂದು ದೊಡ್ಡ ಸಾಧನೆಯಾಗಿ ಪರಿಗಣಿಸಲ್ಪಡುತ್ತದೆ. ಸ್ವಂತಮನೆ ಉಳ್ಳವನಿಗೆ ಗೌರವವೂ ಶಾಂತಿಸುಖಗಳೂ ತಕ್ಕಮಟ್ಟಿಗೆ ದೊರಕುವವು.

ಹೀಗೆಯೇ ಪ್ರಪಂಚವೆಂಬ ದೊಡ್ಡ ನಗರದಲ್ಲಿ ಜೀವರುಗಳು ಪ್ರಾರಬ್ಧಕರ್ಮವೆಂಬ ಮುಂಗಡವನ್ನು ತೆತ್ತು 'ಶರೀರ'ವೆಂಬ ಬಾಡಿಗೆಯ ಮನೆಯನ್ನು ಆಶ್ರಯಿಸಿರುತ್ತಾರೆ. ಇದಕ್ಕೆ ಆಹಾರ, ನೀರು, ಬಟ್ಟೆ, ಔಷಧಾದಿಗಳ ರೂಪದ ಬಾಡಿಗೆಯನ್ನು ದಿನದಿನವೂ ತೆರುತ್ತಾರೆ. ಜಗದೊಡೆಯನಾದ ದೇವನೆಂಬ ಯಜಮಾನನು ಋಣಾನುಬಂಧವು ತೀರಿದನಂತರ ಈ ಜೀವರಿಗೆ ಮನೆಯನ್ನು ಬಿಡಲು ರೋಗರುಜಿನಗಳು, ಮುಪ್ಪು, ಆಯಾಸ-ಮುಂತಾದ ನೋಟೀಸುಗಳನ್ನು ಕಳುಹಿಸಿದಮೇಲೂ ಇವರು ಮನೆಯನ್ನು ಖಾಲಿಮಾಡದೆ ಅಭಿಮಾನಗ್ರಸ್ತರಾಗಿ ಕುಳಿತಿರುತ್ತಾರೆ. ಆದರೆ ಶರೀರವನ್ನು ಮೃತ್ಯುವು ಆವರಿಸಿ ಅನಿವಾರ್ಯವಾಗಿ ಬಿಡಲೇಬೇಕಾದಾಗ ಕರ್ಮಗಳೆಂಬ ಬಂಡವಾಳದ ಬಲದಿಂದ ಮತ್ತೊಂದು ಶರೀರವೆಂಬ ಮನೆಯನ್ನು ಹಿಡಿದು ಅಲ್ಲಿ ಅಭಿಮಾನದಿಂದ ಕೂಡುತ್ತಾರೆ. ಹೀಗೆಯೇ ಮನೆಯಿಂದ ಮನೆಗೆ ಸುತ್ತುವದೇ ಇವರ ಕಥೆಯಾಗಿದೆ. ಇಂಥ ಸಂಸಾರಿಗಳಿಗೆ ತಮ್ಮ ಸ್ವಂತ ಮನೆಯ ವಿಚಾರವಾಗಿ ಹೊಳೆಯುವದೇ ಇಲ್ಲ.

"ಅಲ್ಲಿದೆ ನಮ್ಮ ಮನೆ, ಇಲ್ಲಿ ಬಂದೆ ಸುಮ್ಮನೆ" ಎಂದು ದಾಸರು ಹಾಡಿರುವಂತೆ ಜೀವರೆಲ್ಲರೂ ತಮ್ಮ ಸ್ವಂತ ಮನೆಯಾದ ಪರಮಾತ್ಮನ ಸಾನ್ನಿಧ್ಯವನ್ನು ಬಿಟ್ಟು ಬಂದಿರುವದರಿಂದಲೇ ದುಃಖಿಗಳಾಗಿರುತ್ತಾರೆ. ಈಗಲೂ ದೇಹಾಭಿಮಾನವನ್ನು ಕಳಚಿಕೊಂಡು ತಮ್ಮ ಅಂತರಾತ್ಮನೇ ಆಗಿರುವ ಭಗವಂತನನ್ನು ಕಂಡುಕೊಂಡಲ್ಲಿ ಮತ್ತೆ ಎಂದಿಗೂ ಮನೆಯನ್ನು ಹುಡುಕುವ ಪ್ರಸಂಗವೇ ಇರಲಾರದು. ಆಗ ಸ್ವಂತ ಮನೆಯ ಸುಖ-ಆನಂದಾದಿಗಳು ಅವರಿಗೆ ದೊರೆತು ಕೃತಾರ್ಥರಾಗುವರು.

---

* ಶ್ರೀಯುತರು 1-11-90 ರಿಂದ ಬಾಡಿಗೆಮನೆಯನ್ನು ಬಿಟ್ಟು ಸ್ವಂತ ಮನೆಗೆ ವಾಸಕ್ಕೆ ಬಂದಾಗ ಬರೆದುಕಳುಹಿಸಿರುವ ಲೇಖನವಿದು. ಸ್ವಗೃಹವು ಸುಖಕರವಾಗಲಿ-ಎಂದು ಹಾರೈಸೋಣ.

# ಆಸ್ತಿಯ ಪಾಲು

(ಶ್ರೀಸಚ್ಚಿದಾನಂದೇಂದ್ರಸರಸ್ವತೀಮಹಾಸ್ವಾಮಿಗಳು)

ಒಬ್ಬ ತಂದೆಯು ಮಕ್ಕಳಿಗೆ ತನ್ನ ಆಸ್ತಿಯನ್ನೆಲ್ಲ ಇಚ್ಛಾಪತ್ರ (ಉಯಿಲು)ದಲ್ಲಿ ಬರೆದು ರಿಜಿಸ್ಟರು ಮಾಡಿಸಿದ್ದನು. ಈ ವಿಷಯವು ಮಕ್ಕಳಿಗೆ ಹೇಗೋ ತಿಳಿಯಿತು. ಅವರು ಅದನ್ನು ನೋಡಬೇಕೆಂದು ಬಹಳ ಕುತೂಹಲವುಳ್ಳವರಾಗಿದ್ದರು. ಆದರೆ ತಂದೆಯು ಅದನ್ನು ಗೋಪ್ಯವಾಗಿಟ್ಟಿದ್ದನಲ್ಲದೆ ಯಾವ ಕಚೇರಿಯಲ್ಲಿ ಯಾವ ಊರಿನಲ್ಲಿ ರಿಜಿಸ್ಟರು ಮಾಡಿಸಿದ್ದಾನೆಂಬುದೂ ತಿಳಿಯದಂತೆ ರಹಸ್ಯವನ್ನು ಕಾಪಾಡಿದ್ದನು.

ಒಂದು ದಿನ ಒಂದು ಆಶ್ಚರ್ಯದ ಘಟನೆ ನಡೆಯಿತು. "ಆಸ್ತಿಯನ್ನು ಪೋಲು ಮಾಡದೆ ಅದರ ಲಾಭವನ್ನು ಎಲ್ಲರಿಗೂ ಹಂಚಿಕೊಟ್ಟು ಅಭಿವೃದ್ಧಿಗೊಳಿಸಬಲ್ಲ ಮಗನಿಗೆ ನನ್ನ ಆಸ್ತಿಯನ್ನೆಲ್ಲ ಬಿಟ್ಟುಕೊಟ್ಟಿದ್ದೇನೆ. ಅದನ್ನು ಇಂದೇ ಆ ಮಗನು ಸ್ವಾಧೀನಪಡಿಸಿಕೊಳ್ಳಬಹುದು" ಎಂದು ಬರೆದಿದ್ದ ಇಚ್ಛಾಪತ್ರದ ನಕಲು ಪ್ರತಿಯೊಬ್ಬ ಮಗನ ಅಂಗಿಜೇಬಿನಲ್ಲಿದ್ದುದು ಅವರೆಲ್ಲರಿಗೂ ಏಕಕಾಲಕ್ಕೆ ಸಿಕ್ಕಿತು. ಆಗ ಸಹೋದರರು ಒಬ್ಬರ ಮುಖವನ್ನೊಬ್ಬರು ನೋಡಿಕೊಳ್ಳಲಾರಂಭಿಸಿದರು. ತಂದೆಯ ಉದ್ದೇಶವನ್ನು ನೆರವೇರಿಸುವ ಪ್ರಾಮಾಣಿಕತೆ, ಯೋಗ್ಯತೆ, ಭ್ರಾತೃಪ್ರೇಮ-ಮುಂತಾದ ಬಂಡವಾಳಗಳು ತಮ್ಮಲ್ಲಿವೆಯೆ ? ಇದ್ದರೆ ಇತರರಿಗಿಂತ ಮಿಗಿಲಾಗಿದೆಯೆ ? ಕೊರತೆಯಾಗಿದೆಯೆ ? ಎಂದು ತಮ್ಮಲ್ಲಿ ತಾವೇ ಯೋಚಿಸಲಾರಂಭಿಸಿದರು. ಆಸ್ತಿಯಮೇಲಿನ ಆಸೆಗಿಂತ ತಂದೆಯಮೇಲಿನ ಪ್ರೇಮವು ಅವರಿಗೆ ಅಧಿಕವಾಗಿತ್ತು.

ನಾವೆಲ್ಲರೂ ಭಗವಂತನ ಮಕ್ಕಳು. ಅವನು ತನ್ನ ಆಸ್ತಿಯಾದ ಅಧ್ಯಾತ್ಮ ಸಂಪತ್ತನ್ನು ಒಂದು ಇಚ್ಛಾಪತ್ರದಲ್ಲಿ ಬರೆದು ನಮ್ಮೆಲ್ಲರ ಹೃದಯದೊಳಗೂ ಅದರ ನಕಲು ಇಟ್ಟಿರುತ್ತಾನೆ. 'ಈ ಸಂಪತ್ತು ಯಾರೊಬ್ಬರ ಸ್ವಂತ ಸ್ವತ್ತಾಗಲಾರದು. ಇದನ್ನು ಎಲ್ಲರ ಹಿತಕ್ಕೆ ಉಪಯೋಗಿಸುವವನಿಗೆ ಇದನ್ನು ಪೂರ್ಣವಾಗಿ ಬಿಟ್ಟಿದ್ದೇನೆ ವಿಶ್ವಕಲ್ಯಾಣಕ್ಕೆ ಉಪಯೋಗಿಸುವ ಒಬ್ಬೊಬ್ಬನಿಗೂ ಇದು ಪೂರ್ಣವಾಗಿ ಸೇರಿರುತ್ತದೆ' ಎಂದು ಆ ಇಚ್ಛಾಪತ್ರದಲ್ಲಿ ಬರೆದಿರುತ್ತದೆ.

ಈಗಿನ ಕಾಲದಲ್ಲಿ ಅಧಿಕಾರಕ್ಕಾಗಿ ಹಾತೊರೆಯುವವರೇ ಹೆಚ್ಚಾಗಿ ಕಂಡುಬರುತ್ತಾರೆ. ಅಧಿಕಾರದಲ್ಲಿದ್ದಾಗ ಲೋಕಕಲ್ಯಾಣದ ಕೆಲಸಗಳನ್ನು ನಾನು ಎಷ್ಟರಮಟ್ಟಿಗೆ ನೆರವೇರಿಸಿದ್ದೇನೆ-ಎಂಬಿದನ್ನು ಮೆಲುಕುಹಾಕುವವರು ಕಡಿಮೆ. ಅದರಲ್ಲಿಯೂ ಜನರಿಗೆ ಆಹಾರ, ವಸತಿ, ಲೌಕಿಕವಿದ್ಯೆಗಳ ಬಗ್ಗೆ ಏರ್ಪಾಡುಮಾಡಿದ್ದರಿಂದಲೇ ತಾವು ಕೃತಾರ್ಥರಾದೆವೆಂದು ಭಾವಿಸಿರುವವರೂ ಉಂಟು. ಹೀಗಿರುವಲ್ಲಿ ಅಧ್ಯಾತ್ಮ ಸಂಪತ್ತನ್ನು ದೇಶದ ಜನರಿಗೆ ಹಂಚುವ ಆಲೋಚನೆಯಾದರೂ ಎಲ್ಲಿಂದ ಬಂತು ? ನಿಜವಾದ ಸಂಪತ್ತೆಂದರೆ ಅಧ್ಯಾತ್ಮಜ್ಞಾನವೇ- ಎಂಬುದು ತಿಳಿದಲ್ಲದೆ ಇದು ಸಾಧ್ಯವಾಗಲಾರದು.

——— ———

---

# ಶಂಕರಭಾಸ್ಕರ

## ಆಧ್ಯಾತ್ಮಿಕತ್ರೈಮಾಸಿಕಪತ್ರಿಕಾ

1990ನೆಯ ಜನವರಿಯಿಂದ ಮೂರನೆಯ ಸಂಪುಟವು ಪ್ರಾರಂಭವಾಗಿದೆ.

ಚಂದಾ ವಿವರಗಳು :

| | |
|---|---|
| ಆಜೀವಸದಸ್ಯರಿಗೆ | ರೂ. 251-00 |
| ನಾಲ್ಕು ವರ್ಷಗಳಿಗೆ | ರೂ. 50-00 |
| ವಾರ್ಷಿಕ ಚಂದಾ | ರೂ. 15-00 |
| ಮಾದರಿ ಸಂಚಿಕೆಗೆ | ರೂ. 5-00 |

ಹಣವನ್ನು ನಗದು, M.O. ಚೆಕ್, ಡಿ.ಡಿ. ಯಾವ ಮೂಲಕವಾದರೂ 'ಶಂಕರಭಾಸ್ಕರ' ಎಂಬ ಹೆಸರಿಗೆ ಬೆಂಗಳೂರು ವಿಳಾಸಕ್ಕೇ ರವಾನಿಸಿರಿ.

ವಿಳಾಸ- ಅಧ್ಯಾತ್ಮಪ್ರಕಾಶಕಾರ್ಯಾಲಯ,
ತ್ಯಾಗರಾಜನಗರ, ಬೆಂಗಳೂರು-560028.

ಅದೃಷ್ಟಂ ತದಕರ್ಮತ್ವಾತ್ ಕೌಟಸ್ಥ್ಯಾನ್ನಾಪಿ ದೃಷ್ಟಿಕೃತ್ |
ಜನ್ಯಾದಿವಿಕ್ರಿಯಾಷಟ್ಕನಿಷೇಧೋಽಪ್ಯೇವಮರ್ಥವಾನ್ ||

೬೮೪. ಆ ಬ್ರಹ್ಮವು ಕರ್ಮವಲ್ಲದ್ದರಿಂದ ದೃಶ್ಯವಲ್ಲ. ಕೂಟಸ್ಥವಾದ್ದರಿಂದ ದ್ರಷ್ಟೃವೂ ಅಲ್ಲ. ಹೀಗೆಯೇ ಬ್ರಹ್ಮಕ್ಕೆ ಜನ್ಮಾದಿವಿಕಾರಗಳಿಲ್ಲ- ಎಂಬ ವಾಕ್ಯವನ್ನೂ ಅರ್ಥಮಾಡಿಕೊಳ್ಳಬೇಕು.

ಪ್ರಮಾತೃತ್ವಾದಿಭೇದೇನ ಯತ್ಸ್ವರೂಪಂ ಪ್ರತೀಯತೇ |
ತತ್ಪ್ರಕಾಶ್ಯತ ಇತ್ಯಾಹುರಪ್ರಕಾಶಸ್ವರೂಪತಃ ||

೬೮೫. ಪ್ರಮಾತೃವೇ ಮುಂತಾದ ಭೇದದಿಂದ ಯಾವ ಸ್ವರೂಪವು ತೋರುತ್ತಿರುವದೋ ಅದನ್ನು ಅಪ್ರಕಾಶ(ಜಡ)ವಸ್ತುಗಳ ಅಪೇಕ್ಷೆಯಿಂದ ಗೌಣವಾಗಿ ಪ್ರಕಾಶಿಸುತ್ತದೆ- ಎನ್ನಲಾಗಿದೆ.

ಪ್ರಮಾತ್ರೈವ ಪ್ರಮೇಯಂ ಚೇತ್ ಪ್ರಮಾಣಂ ಪ್ರಮಿತಿಸ್ತಥಾ |
ಸ್ವರೂಪಾಚ್ಚೈಕರೂಪತ್ವಾನ್ನ ತದೇಭಿರ್ನಿರುಚ್ಯತೇ ||

೬೮೬. ಪ್ರಮಾತೃವೇ ಪ್ರಮೇಯವೂ ಪ್ರಮಾಣವೂ ಪ್ರಮಿತಿಯೂ ಆಗಿರುವಲ್ಲಿ ಸ್ವರೂಪವೊಂದೇ. ಅದು ಏಕರೂಪವೇ- ಎಂದಾಗಿ ಈ ಶಬ್ದಗಳಿಂದ ಅದು ಹೇಳಲ್ಪಡುವದಿಲ್ಲ.

ಪ್ರಾಮಾಣ್ಯಮನುವಾದಾನಾಂ ನ ಚೇನ್ ಸ್ವವಿಷಯೇ ಮತಮ್ |
ಪಯೋಗುಣಸ್ಯ ಸಂಬಂಧೋ ನ ಪ್ರಾಪ್ನೋತಿ ಜುಹೋತಿನಾ ||

೬೮೭. ಅರ್ಥವಾದರೂಪನಾದ ಅನುವಾದಶಬ್ದಗಳಿಗೆ ಆಯಾ ಸ್ವವಿಷಯಗಳಲ್ಲಿ ಪ್ರಾಮಾಣ್ಯವಿಲ್ಲವೆಂದಾಗಿಬಿಟ್ಟರೆ 'ಪಯಸಾ ಜುಹೋತಿ' ಮುಂತಾದ ವಾಕ್ಯಗಳಲ್ಲಿ ವಿಧಿಯಿಲ್ಲದ್ದರಿಂದ ಪ್ರಾಮಾಣ್ಯವಿಲ್ಲದಂತಾಗಿಬಿಡುವದು.

ಸ್ವರ್ಗೇಣೈವಾಭಿಸಂಬಂಧಃ ಪಯಸಶ್ಚೇದನುತ್ತರಮ್ |
ಸ್ವರ್ಗಸ್ಯ ಸಿದ್ಧಯೇ ನಾಲಂ ದ್ರವ್ಯಮಾತ್ರಂ ಪಯೋ ಯತಃ ||

೬೮೮. ಪಯಸಾ ಜುಹೋತಿ- ಮುಂತಾದವುಗಳಲ್ಲಿ ಪಯಆದಿಗಳಿಗೆ ಸ್ವರ್ಗದೊಡನೆಯೇ ಸಂಬಂಧವೇ ಹೊರತು 'ಜುಹೋತಿ' ಎಂಬುದರೊಡನೆ ಅಲ್ಲ- ಎನ್ನುವದಾದರೆ ಅದು ಉತ್ತರವಲ್ಲ. ಏಕೆಂದರೆ ಸ್ವರ್ಗವು ದೊರಕಬೇಕಾದರೆ ಕೇವಲ ದ್ರವ್ಯವಾದ ಪಯಸ್ಸಿನಿಂದ ಆಗುವದಿಲ್ಲ. ಏಕೆಂದರೆ ಅದು ಬರಿಯ ವಸ್ತುವು. ಆದ್ದರಿಂದ 'ಜುಹೋತಿ' ಎಂಬಿದೇ ಸ್ವರ್ಗಸಾಧನವಾದೀತು.

ಪ್ರಣಯಃ ಸಾಧನತ್ವಂ ಚ ಪ್ರಾಪ್ತಂ ತಸ್ಮಾದನೂದ್ಯತೇ |
ವಿಶಿಷ್ಟೋಽಪಾಶ್ರಯಂ ದ್ರವ್ಯಮತೋಽಲಂ ಪಶುಸಿದ್ಧಯೇ ||

೬೮೯. ನೀರನ್ನು ತರುವ ಕರ್ಮದಲ್ಲಿ ಚಮಸವೆಂಬ ಪಾತ್ರೆಯು ಸಾಧನವಾಗಿದ್ದರೂ ಪಶುಕಾಮನಾದವನು ಗೋದೋಹನಪಾತ್ರೆಯಲ್ಲಿ ಪ್ರಣಯನಮಾಡಬೇಕೆಂದು ಹೇಳಿದೆಯಷ್ಟೆ. ಹೀಗೆ ವಿಶಿಷ್ಟವಾದ ಆಶ್ರಯವುಳ್ಳ ದ್ರವ್ಯವು ಪಶುಪ್ರಾಪ್ತಿಗೆ ಸಾಧನವಾಗಿದೆ. ಆದ್ದರಿಂದ ಅಪ್‌ಪ್ರಣಯನವೆಂಬ ವಿಶಿಷ್ಟಕರ್ಮವನ್ನೇ ಪಶುಕಾಮನ ವಾಕ್ಯದಲ್ಲಿ ಅನುವಾದಮಾಡಿದೆ. ಹೀಗೆ ಕ್ರಿಯಾಸಂಬಂಧವನ್ನು ಆಶ್ರಯಿಸಿಯೇ ವಸ್ತುವು ಪುರುಷಾರ್ಥಸಾಧನವೆನಿಸುತ್ತದೆ.

ಗೋದೋಹನಸ್ಯ ಭಿನ್ನತ್ವಾತ್ ಭಿನ್ನಂ ಚೇತ್ ಸಾಧನಂ ಮತಮ್ |
ಪ್ರಾಪ್ತಾ ಪ್ರಣಯತೀತ್ಯಸ್ಯ ಸಾಧ್ಯಭೇದಾದ್ ವಿಭಿನ್ನತಾ ||

೬೯೦. ಗೋದೋಹನವೆಂಬ ಕ್ರಿಯೆಯು ಪ್ರಣಯನಕ್ಕಿಂತ ಬೇರೆಯಾದ್ದರಿಂದ ಸಾಧನವೂ ಬೇರೆಯಾಗಿರಬೇಕಲ್ಲವೆ? ಎಂದರೆ ಹಾಗಲ್ಲ. ಏಕೆಂದರೆ ಆಗ ಸ್ವರ್ಗ, ಪಶುಪ್ರಾಪ್ತಿ–ಎಂಬ ಸಾಧ್ಯಗಳೂ ಬೇರೆಬೇರೆಯಾಗಬೇಕಾಗುವದು.

ಹಾನೋಪಾದಾನಶೂನ್ಯತ್ವಾದಪ್ರಾಮಾಣ್ಯಂ ಮತಂ ಯದಿ |
ಬ್ರಹ್ಮಾಸ್ಮೀತಿ ಪರಿಜ್ಞಾನಮಪ್ರಮಾಣಂ ಪ್ರಸಜ್ಯತೇ ||

೬೯೧. ವಸ್ತುಬೋಧಕವಾಕ್ಯದಲ್ಲಿ ಹಾನೋಪಾದಾನಗಳಿಲ್ಲದ್ದರಿಂದ ಅಪ್ರಮಾಣವು ಸಂಭವಿಸುತ್ತದೆ–ಎನ್ನುವದಾದರೆ ಅಹಂ ಬ್ರಹ್ಮಾಸ್ಮಿ ಎಂಬ ಜ್ಞಾನವೂ ಅಪ್ರಮಾಣವೆಂದು ಪ್ರಸಕ್ತವಾಗುವದು.

ಆತ್ಮತ್ವಾದನುಪಾದೇಯಮನನ್ಯತ್ವಾದಹೇಯತಾ |
ಅಭಿಧಾಶ್ರುತೇಶ್ಚೇದೇತತ್ ಸ್ಯಾತ್ ಕಿಮನ್ಯತ್ ಪ್ರಾರ್ಥ್ಯತೇ ವಿಧೇಃ ||

೬೯೨. ಬ್ರಹ್ಮವು ಆತ್ಮನಾದ್ದರಿಂದ ಅನುಪಾದೇಯವಾಗಿದೆ. ಹಾಗೆಯೇ ಆತ್ಮನಿಗಿಂತ ಅನ್ಯವಲ್ಲವಾದ್ದರಿಂದ ಅಹೇಯವೂ ಆಗಿದೆ. ಈ ಕಾರ್ಯವು ಅಭಿಧಾಶ್ರುತಿಯಿಂದಲೇ ಆಗುವದಾದರೆ ವಿಧಿಯನ್ನು ಪ್ರಾರ್ಥಿಸಿಕೊಳ್ಳುವದಾದರೂ ಏನಿದೆ ?

ಅನೂಕ್ತೇರಪಿ ಮಾನತ್ವಂ ನೈವ ಧ್ವಾಂಕ್ಷೈರ್ವಿಲುಪ್ಯತೇ |
ನಿಯೋಗಾನುಪ್ರವಿಷ್ಟತ್ವಾತ್ ಯಥೈವೇಹಾಭಿಧಾಶ್ರುತೇಃ ||

೬೯೩. ಅಭಿಧಾಶ್ರುತಿಗೆ ಪ್ರಾಮಾಣ್ಯವು ನಿಯೋಗದ ಹಂಗಿಲ್ಲದೆ ಸಿದ್ಧವಾಗುವದು ಆಗಬಹುದಾದರೆ ಅನುವಾದವಾಕ್ಯಗತವಾದ ಪದಗಳಿಗೂ ಆಯಾ ಪದಾರ್ಥಗಳ ಬೋಧನೆಯಲ್ಲಿ ಪ್ರಾಮಾಣ್ಯವು ಸಿದ್ಧವಾಗುವದನ್ನು ಯಾವ ಮೀಮಾಂಸಕನೆಂಬ ಕಾಗೆಯೂ ನಿವಾರಿಸಲಾರನು.

ಏವಂ ಚ ಸತಿ ದೃಷ್ಟಾಂತೋ ಭವತಾಂ ನೋಪಪದ್ಯತೇ |
ನಿಯೋಗಾದೇವ ವಿಜ್ಞಾನಮಿತ್ಯೇವಂ ನಿಯಮಃ ಕುತಃ ||

೬೯೪. ಹೀಗೆ ಅನುವಾದವಾಕ್ಯಗತವಸ್ತುವಿಗೆ ನಿಯೋಗವಿಲ್ಲದೆ ಪ್ರಾಮಾಣ್ಯವು ಸಿದ್ಧಿಸುವದಾದರೆ ನಿಯೋಗಕ್ಕೆ ಒಳಪಟ್ಟದ್ದು ಮಾತ್ರವೇ ಪ್ರಮಾಣವು ಎಂಬಿದಕ್ಕೆ ದೃಷ್ಟಾಂತವಿಲ್ಲವಾಗುವದು. ಆದ್ದರಿಂದ ನಿಯೋಗದಿಂದಲೇ ವಿಜ್ಞಾನವು ಎಂಬ ನಿಯಮವೇಕೆ ?

ವಾದಾನುವಾದಯೋರರ್ಥೋ ಯದಿ ಭಿನ್ನಃ ಪ್ರತೀಯತೇ |
ಅಗತಾರ್ಥಾಧಿಗಂತೃತ್ವಾದಸ್ತ್ವನೂಕ್ತೇಃ ಪ್ರಮಾಣತಾ ||

೬೯೫. (ವಿಧಿ)ವಾದ, ಅನುವಾದಗಳಿಗೆ ಅರ್ಥವು ಬೇರೆಬೇರೆಯಾಗಿ ಕಂಡು ಬಂದಲ್ಲಿ ಹೇಳದೆ ಇರುವ ಅರ್ಥವನ್ನು ತಿಳಿಸಿದ್ದರಿಂದ ಅನುವಾದಕ್ಕೂ ಪ್ರಾಮಾಣ್ಯವು ಉಂಟಾಗಲಿ ; (ಏಕಾಗಬಾರದು ?)

ಅನ್ವಕ್ಷಂ ಭಿನ್ನರೂಪಾ ಧೀರಿಹ ವಾದಾನುವಾದಯೋಃ |
ಅಪೂರ್ವಾಧಿಗತಿಃ ಪೂರ್ವಮಿಹ ಬುದ್ಧಾವಬೋಧನಮ್ ||

೬೯೬. ಇಲ್ಲಿ ವಾದ-ಅನುವಾದಗಳಿಗೆ ಆಯಾ ಇಂದ್ರಿಯ(ಪ್ರತ್ಯಕ್ಷಾನುಗುಣವಾಗಿ) ಭಿನ್ನರೂಪವಾದ ಜ್ಞಾನವು ಇರುತ್ತವೆ. ಅಪೂರ್ವವಾದದ್ದರ ತಿಳಿವಳಿಕೆಯುಂಟಾಗುವದು ಹಿಂದೆ ಹೇಳಿದ್ದು. ಇಲ್ಲಿಯಾದರೊ ತಿಳಿದದ್ದನ್ನೇ ತಿಳಿಯತಕ್ಕದ್ದಾಗಿದೆ.

ಮೃಗತೋಯಾದಿವನ್ಮಿಥ್ಯಾ ಯದ್ಯನೂಕ್ತೇರ್ಭವೇನ್ಮತಿಃ |
ವಿಧೇರ್ನಿರ್ವಿಷಯತ್ವಂ ವಃ ಸರ್ವತ್ರೈವ ಪ್ರಸಜ್ಯತೇ ||

೬೯೭. ಪದದಿಂದುಂಟಾದ ಬುದ್ಧಿಯು ಬಿಸಿಲುಗುದುರೆ ನೀರಿನಂತೆ ಮಿಥ್ಯೆಯೆಂದಾದರೆ ಆಗ ನಿಯೋಗವು ನಿರ್ವಿಷಯವೆಂದಾಗುವದು. ಇದು ಎಲ್ಲಾ ಕಡೆಯಲ್ಲೂ ಪ್ರಾಪ್ತವಾಗುವದು.

ಸ್ವಾಭಿಧೇಯಂ ನಿರಾಕಾಂಕ್ಷೋ ಹ್ಯನುವಾದಃ ಪ್ರಬೋಧಯೇತ್ |
ತತ್ರ ಚೇದಪ್ರಮಾಣಂ ಸ್ಯಾತ್ ಸ್ಯಾತ್ತದುಚ್ಚಾರಣಂ ವೃಥಾ ||

೬೯೮. ಅನುವಾದವು ತಾನು ಹೇಳಬೇಕಾದದ್ದನ್ನು ನಿರಾಕಾಂಕ್ಷವಾಗಿ ತಿಳಿಸಬೇಕಾಗಿರುತ್ತದೆ. ಅಲ್ಲಿ ಅದು ಪ್ರಮಾಣವಲ್ಲವೆಂದಾದರೆ ಅದನ್ನು ಉಚ್ಚಾರಣೆಮಾಡಿದ್ದೇ ವ್ಯರ್ಥವೆಂದಾಗುವದು.

ಸಾಕಾಂಕ್ಷತ್ವಾನುವಾದತ್ವೇ ಕುತಶ್ಚಾವಗತೇ ತ್ವಯಾ |
ಅಪ್ರಾಮಾಣ್ಯಾನ್ನ ಚೇತ್ತಾಭ್ಯಾಂ ವಿಧೇಯಪ್ರಕ್ಷಯಾದ್ವಿಧೇಃ ||

೬೯೯. ಇನ್ನು ನೀನು ಸಾಕಾಂಕ್ಷತ್ವ, ಅನುವಾದತ್ವಗಳನ್ನು ಪದದಿಂದಲೊ, ವಿಧಿಯಿಂದಲೊ-ಎಲ್ಲಿಂದ ತಿಳಿದವನಾದೆ ? ಪದಪ್ರಾಮಾಣ್ಯವನ್ನು ಒಪ್ಪಿಲ್ಲವಾಗಿ ಇದು ತಿಳಿಯಲಾರದು. ಹಾಗಿಲ್ಲವಾದರೆ ವಿಧಿವಶನಾಗಿಯೇ ತಿಳಿದಿದ್ದರೆ ವಿಧಿಯು ಅರ್ಥವನ್ನು ಹೇಳುವದರಿಂದ ಉಪಕ್ಷೀಣವಾಗಿದ್ದು ತಿಳಿಯುವದಾಗಲಾರದು.

ಸ್ವಶಬ್ದಾನಭಿಧೇಯಂ ಯತ್ತದೇವಾಪೇಕ್ಷತೇ ಪದಮ್ ।
ಸ್ವಾರ್ಥೇ ತದಪ್ರಮಾಣಂ ಚೇತ್ ವಾಕ್ಯಾರ್ಥಸ್ಯಾನ್ವಯಃ ಕುತಃ ॥

೨೦೦. ಪದವು ಸ್ವಶಬ್ದದಿಂದ ಹೇಳಲ್ಪಡದಿರುವದನ್ನೇ ಬಯಸುತ್ತದೆ. ಆದರೆ ಆದು ನಿರಾಕಾಂಕ್ಷವಾಗಿ ಪದಾರ್ಥದ ವಿಷಯದಲ್ಲಿ ಪ್ರಮಾಣವಲ್ಲದೆ ಹೋದರೆ ವಾಕ್ಯಾರ್ಥದ ಅನ್ವಯವು ಹೇಗಾದೀತು ?

ಅಪ್ರಮಾಣಮಿತಿ ಜ್ಞಾನಂ ಕಸ್ಮಾದಜ್ಞಾಯಿ ಕಥ್ಯತಾಮ್ ।
ವಿದ್ಯಮಾನೋಪಲಂಭಾನಿ ನ ಹ್ಯಭಾವಂ ಪ್ರಮಿಣ್ವತೇ ॥

೨೦೧. ಪದವು ಅಪ್ರಮಾಣವು ಎಂಬ ಜ್ಞಾನವು ಏತರಿಂದ ತಿಳಿಯಿತು ? ಎಂಬಿದನ್ನು ಹೇಳುವವನಾಗು. ಪ್ರತ್ಯಕ್ಷದಿಂದಾದರೆ ಇದ್ದುದನ್ನು ಕಾಣುವ ಅದು ಅಭಾವವನ್ನು ತಿಳಿಸಲಾರದು.

ಪರಸ್ವಭಾವವಿಧ್ವಂಸವರ್ತ್ಮನೈವಾತ್ಮವಸ್ತುನಃ ।
ವಕ್ಷ್ಯತ್ಯವಗತಿಂ ಚೋರ್ಧ್ವಂ ವಿಧಿನೈವೇತಿ ದುಃಸ್ಥಿತಮ್ ॥

೨೦೨. ಅನಾತ್ಮಸ್ವಭಾವದ ಅನ್ನಮಯಾದಿಗಳ ಪ್ರತಿಷೇಧದ್ವಾರದಿಂದಲೇ ಆತ್ಮವಸ್ತುವಿನ ಜ್ಞಾನವನ್ನು ಮುಂದೆ ಹೇಳಲಾಗುವದು. ಆದ್ದರಿಂದ ವಿಧಿಯಿಂದಲೇ ಜ್ಞಾನವೆಂದು ಹೇಳುವದು ಕಷ್ಟಕರವಾಗಿರುವದು.

ವ್ಯಾವೃತ್ತಿಃ ಪರತೋಽಭಾವೋ ನ ಚ ತಸ್ಯೇಂದ್ರಿಯೇಣ ಹಿ ।
ಸಂಬಂಧೋಽಸ್ತಿ ತತೋ ಭೇದಃ ಪ್ರಮಾಣೈರ್ನೋಪಲಭ್ಯತೇ ॥

೨೦೩. ಮತ್ತೊಂದರಿಂದ ವ್ಯಾವೃತ್ತಿಯೆಂಬುದು ಅಭಾವವೆಂದಾದರೆ ಅದು ಇಂದ್ರಿಯದಿಂದ ಅಲ್ಲ. ಏಕೆಂದರೆ ಅಭಾವಕ್ಕೆ ಇಂದ್ರಿಯಸಂಬಂಧವಿಲ್ಲ. ಅನಂತರ ಭೇದವು ಉಳಿದ ಪ್ರಮಾಣಗಳಿಂದಲೂ ಕಂಡುಬರುವದಿಲ್ಲ.

ಪ್ರಮಾಭಾವಸ್ವರೂಪತ್ವಾತ್ ನಾಪ್ಯಭಾವಾದ್ ಭಿದೇಷ್ಯತೇ ।
ಸಂವಿತ್ತ್ಯಭಾವೋ ನೈವೇಹ ಪ್ರಕಾಶಯತಿ ಕಿಂಚನ ॥

೨೦೪. ಪ್ರಮಾಭಾವಸ್ವರೂಪವಾದ ಅಭಾವದಿಂದ ಭೇದವು ಸಿದ್ಧವಾಗುವದಿಲ್ಲ. ಜ್ಞಾನದ ಅಭಾವವು ಯಾವ ವಸ್ತುವನ್ನೂ ಬೆಳಗಲಾರದು.

ಇತಿ ಸ್ವಾಭಿಮತಂ ಸರ್ವಂ ತೇನ ಚಾಸ್ಯ ವಿರುದ್ಧತಾ ।
ವಸ್ತುವೃತ್ತಾನುರೋಧೇನ ವ್ಯಾಪಾರಃ ಫಲವಾನಿಹ ॥

೨೦೫. ಹೀಗೆ ಆಕ್ಷೇಪಕನ ಅಭಿಪ್ರಾಯವೆಲ್ಲವೂ ಪ್ರಮಾಣವಿದರಿಗೆ ವಿರೋಧವಾಗಿದ್ದು– ಆತ್ಮವಸ್ತುವಿನ ಸ್ವಭಾವಕ್ಕನುಗುಣವಾದ ವ್ಯಾಪಾರವೇ ಇಲ್ಲಿ ಫಲಪ್ರದವಾಗಿರುವದು.

ನ ಕುಲಾಲವಶಾದ್ ವ್ಯೋಮ ಶರಾವಾಯಾಪ್ಯಲಂ ಯತಃ ।
ಆತ್ಮಜ್ಞಾನಂ ಪ್ರಸಿದ್ಧಂ ಚೇತ್ ವಿಧೇರೇವ ವಿಧಿಃ ಕುತಃ ।
ಅಥಾಪ್ರಸಿದ್ಧಂ ನಿತರಾಂ ವಿಧಿರ್ನೈವೋಪಪದ್ಯತೇ ॥

೭೦೬. ಆಕಾಶವು ಶರಾವವನ್ನು ಮಾಡಲು ಯೋಗ್ಯವಲ್ಲವಾಗಿದ್ದು ಕುಂಬಾರನ ಕಡೆಯಿಂದ ಅದು ಶರಾವನಿರ್ಮಾಣಕ್ಕೆ ತಕ್ಕದ್ದಾಯಿತೆಂದು ಹೇಳಲಾಗುವದಿಲ್ಲ. ಹಾಗೆಯೇ ಆತ್ಮಜ್ಞಾನವು ಪ್ರಸಿದ್ಧವೇ ಆಗಿದ್ದರೆ ವಿಧಿಯು ಬೇಕಿರುವದಿಲ್ಲ. ಹಾಗಲ್ಲದೆ ಸರ್ವಥಾ ಅಪ್ರಸಿದ್ಧವಾಗಿದ್ದರೆ ವಿಧಿಯು ಹೊಂದುವದೇ ಇಲ್ಲ.

ಕೈವಲ್ಯಕಾರಿತಾ ಬುದ್ಧೇರ್ನಿಯೋಗಾದೇವ ಚೇದ್ ಭವೇತ್ ।
ನಿಯೋಗಾರ್ಥಾವಗತಯೇ ನಿಯೋಗೋಽನ್ಯೋಽಪಿ ಮೃಗ್ಯತಾಮ್ ॥

೭೦೭. ಜ್ಞಾನಕ್ಕೆ ಮೋಕ್ಷವನ್ನುಂಟುಮಾಡುವ ಶಕ್ತಿಯು ನಿಯೋಗದಿಂದಲೇ ಆಗಬೇಕೆನ್ನುವದಾದರೆ ನಿಯೋಗದ ಅರ್ಥವನ್ನು ಅರಿತುಕೊಳ್ಳಲು ಮತ್ತೊಂದು ನಿಯೋಗವನ್ನು ಹುಡುಕೋಣವಾಗಲಿ.

ತತ್ತ್ವಮಸ್ಯಾದಿವಾಕ್ಯೋತ್ಥಂ ವಿಜ್ಞಾನಂ ಸ್ವಫಲಂ ಸ್ವತಃ ।
ಅತೋಽವಗಮ್ಯತೇಽಸ್ಮಾಭಿಃ ತೃಪ್ತ್ಯಾಖ್ಯಫಲವತ್ ಭುಜೇಃ ॥

೭೦೮. ತತ್ತ್ವಮಸಿ– ಮುಂತಾದ ವಾಕ್ಯದಿಂದುಂಟಾದ ವಿಜ್ಞಾನವು ತಾನೇ ಫಲರೂಪವಾಗಿರುವದರಿಂದ ಊಟದ ಫಲವಾದ ತೃಪ್ತಿಯಂತೆ ಅದೇ ಸಾಕಾಗಿರುತ್ತದೆ– ಎಂದು ನಾವು ತಿಳಿಯುತ್ತೇವೆ.

ಸ್ವಾಧ್ಯಾಯೋಽಧ್ಯೇತವ್ಯ ಇತಿ ವಿಧ್ಯಂತರಮೃತೇ ಯಥಾ ।
ವಿಧ್ಯರ್ಥಾವಗಮಸ್ತದ್ವತ್ ಅಸ್ತ್ವಿಹಾಪ್ಯಭಿಧಾಶ್ರುತೇಃ ॥

೭೦೯. 'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ವಿಧಿವಾಕ್ಯಕ್ಕೆ ಬೇರೊಂದು ವಿಧಿವಾಕ್ಯದ ಹಂಗಿಲ್ಲದೆ ಹೇಗೆ ವಿಧ್ಯರ್ಥಬೋಧವಾಗುವದೋ ಹಾಗೆಯೇ ಇಲ್ಲಿಯೂ ಅಭಿಧಾಶ್ರುತಿಗೆ ಬೋಧವು ಆಗಲಿ.

ನಿಯೋಗವಿರಹಾದಸ್ಯ ಯದ್ಯರ್ಥಾವಗಮೋ ಮೃಷಾ ।
ಇಹಾಪಿ ತದಮಾನತ್ವಮಭಿಧಾನಶ್ರುತೇರಿವ ॥

೭೧೦. ನಿಯೋಗವಿಲ್ಲದ್ದರಿಂದ ಅಭಿಧಾಶ್ರುತಿಯ ಅರ್ಥಜ್ಞಾನವು ಆಗುವದಿಲ್ಲವಾಗಿ ಅದು ಸುಳ್ಳು ಎನ್ನುವದಾದರೆ ಅಭಿಧಾಶ್ರುತಿಯಂತೆಯೇ 'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬಲ್ಲಿಯೂ ಬೇರೊಂದು ವಿಧಿವಾಕ್ಯವಿಲ್ಲವಾದ್ದರಿಂದ ಅಪ್ರಮಾಣವೆಂದಾಗಲಿ.

ಭವೇದ್ವಿಧ್ಯನುಕೂಲಾ ವಾ ಅಭಿಧಾ ಯದಿ ವಾ ವಿಧಿಃ ।
ಅಭಿಧಾವರ್ತ್ಮಯಾಯಿಾ ಸ್ಯಾತ್ತತ್ರ ದೋಷಗುಣಾವಿಮೌ ॥

೭೧೧. ಅಭಿಧಾವಾಕ್ಯವು ವಿಧ್ಯನುಗುಣವಾಗಿರಲಿ, ಅಥವಾ ವಿಧಿಯೇ ಅಭಿಧಾನುಗುಣವಾಗಿರಲಿ–ಈ (ಕೆಳಗಿನ) ಗುಣದೋಷಗಳುಂಟಾಗುತ್ತವೆ.

ಸ್ಯಾದ್ದ್ಯುಲೋಕಾಗ್ನಿವತ್ ಜ್ಞಾನಂ ಯದಿ ವಿಧ್ಯನುರೋಧಿನೀ ।
ಅಭಿಧಾಶ್ರುತಿ ದೃಷ್ಟಾರ್ಥಾ ಸಮ್ಯಗ್ಜ್ಞಾನಂ ತು ದುರ್ಲಭಮ್ ॥

೭೧೨. ಅಭಿಧಾವಾಕ್ಯವು ವಿಧ್ಯನುಗುಣವಾದಲ್ಲಿ–ದ್ಯುಲೋಕವೇ ಅಗ್ನಿ ಎಂಬಂತೆ ಜ್ಞಾನವಾಗಬೇಕಾಗುವದು. ಏಕೆಂದರೆ ಅಭಿಧಾಶ್ರುತಿಯು ದೃಷ್ಟಾರ್ಥವಾಗಿರುತ್ತದೆ. ಸಮ್ಯಗ್ಜ್ಞಾನವಂತೂ ದುರ್ಲಭವೇ ಸರಿ.

ಅಥಾಭಿಧಾನುರೋಧೀ ಸ್ಯಾನ್ನಿಯೋಗೋಽಯಂ ತಥಾಪಿ ಚ ।
ಅಭಿಧಾನುವಿಧಾಯಿತ್ವಾತ್ ವಿಧ್ಯರ್ಥೋಽತ್ರ ಸುದುರ್ಲಭಃ ॥

೭೧೩. ಇನ್ನು ವಿಧಿಯೇ ಅಭಿಧಾವಾಕ್ಯಾನುರೋಧಿಯಾದರೆ ಅದು ಅಭಿಧೆಯನ್ನನುಸರಿಸುವದರಿಂದ ವಿಧ್ಯರ್ಥವು ದುರ್ಲಭವೇ ಸರಿ.

ಪ್ರಾಕ್ತು ವಾಕ್ಯಾರ್ಥವಿಜ್ಞಾನಾತ್ತನ್ನಿವಿಷ್ಟಪದಾರ್ಥಯೋಃ ।
ಅನ್ವಯವ್ಯತಿರೇಕಾಖ್ಯವಿವೇಕಾಯ ವಿಧಿರ್ಭವೇತ್ ॥

೭೧೪. ವಾಕ್ಯಾರ್ಥವಿಜ್ಞಾನವುಂಟಾಗುವ ಮುಂಚೆ ಆ ವಾಕ್ಯಗತವಾದ ಪದಗಳಲ್ಲಿ ಅನ್ವಯ–ವ್ಯತಿರೇಕರೂಪವಾದ ವಿವೇಕಕ್ಕಾಗಿ ವಿಧಿಯು ಬೇಕಾಗುವದು.

ವಾಕ್ಯಾರ್ಥಾಪ್ರತಿಪತ್ತೌ ಹಿ ಪದಾರ್ಥಾಜ್ಞಾನಮೇವ ಚ ।
ಪ್ರತಿಬಂಧೋ ಯತಸ್ತಸ್ಮಾದನ್ವಯಾದ್ಯವಲೋಕನಮ್ ॥

೭೧೫. ವಾಕ್ಯಾರ್ಥವು ತಿಳಿಯದೆ ಇರುವದಕ್ಕೆ ಪದಾರ್ಥಗಳ ಅಜ್ಞಾನವೇ ಅಡ್ಡಿಯಾಗಿರುತ್ತದೆ. ಆದ್ದರಿಂದ ಅನ್ವಯವ್ಯತಿರೇಕಗಳನ್ನು ಅಪೇಕ್ಷಿಸಲಾಗಿದೆ.

ವಾಕ್ಯಾರ್ಥಜ್ಞಾನಕಾಲೇ ಯಃ ಪದಾರ್ಥೋ ನೈವ ವಿದ್ಯತೇ ।
ಕರ್ತವ್ಯಃ ಕಾರಕಾಪೇಕ್ಷೋ ವಿಧೇಯಃ ಸ ನ ಸಂಶಯಃ ॥

೭೧೬. ವಾಕ್ಯಾರ್ಥಜ್ಞಾನಕಾಲಕ್ಕೆ ಯಾವ ( ಯಾಗಾದಿ ) ಪದಾರ್ಥವು ಇರುವದೇ ಇಲ್ಲವೋ ಅದು ಕಾರಕಗಳ ಸಹಾಯದಿಂದ ಉಂಟುಮಾಡಲ್ಪಡತಕ್ಕದ್ದಾಗಿದೆ. ಈ ವಿಷಯದಲ್ಲಿ ಸಂಶಯವಿಲ್ಲ.

ವಿಪರೀತಸ್ತತೋ ಯಸ್ತು ವಾಕ್ಯಾದೇವಾವಗಮ್ಯತೇ ।
ನಿತ್ಯೋ ಕರ್ಮವಿಮುಕ್ತಃ ಸನ್ನ ವಿಧೇಯಃ ಕಥಂಚನ ॥

೭೧೭. ಆದರೆ ಕರ್ಮಕ್ಕೆ ವಿಪರೀತವಾದ ಯಾವ ಜ್ಞಾನವಿದೆಯೋ ಅದು ವಾಕ್ಯದಿಂದಲೇ ತಿಳಿದುಬರುತ್ತದೆ. ನಿತ್ಯನೂ ಕರ್ಮವಿಮುಕ್ತನೂ ಆದ ಆತ್ಮನು ಹೇಗೂ ವಿಧೇಯನಾಗಲಾರನು.

ಸ್ವಸಿದ್ಧೇಃ ಕಾರಣಂ ನಾನ್ಯತ್ ಜ್ಞಾನಮಜ್ಞಾನಹಾನಯೇ |
ಯಸ್ಮಾದಪೇಕ್ಷತೇ ತಸ್ಮಾತ್ ನ ನಿದಿಧ್ಯಾಸನಾಯ ತತ್ ||

೭೧೮. ಅಜ್ಞಾನವನ್ನು ಕಳೆಯುವದಕ್ಕಾಗಿ ಆಗುವ ಜ್ಞಾನವು ತನ್ನ ಸಿದ್ಧಿಗೆ ಬೇರೆಯ ಕಾರಣವನ್ನು ಬಯಸುವದಿಲ್ಲ. ಹೀಗೆ ಅದು ಬಯಸದಿರುವದ ರಿಂದಲೇ ನಿದಿಧ್ಯಾಸನ ಶೇಷವಾಗಿ ಆಗಲಾರದು.

ಸಿದ್ಧಮಪ್ಯಾತ್ಮಕಾರ್ಯಸ್ಯ ಕಾರಣಂ ಸಿದ್ಧಯೇ ನ ಚೇತ್ |
ವಿಧ್ಯಪೇಕ್ಷಂ ತದೇವ ಸ್ಯಾನ್ನ ಸ್ವಸಿದ್ಧಿಪ್ರಕಾಶಕಮ್ ||

೭೧೯. ಜ್ಞಾನವು ತನ್ನ ಕಾರ್ಯವಾದ ಅಜ್ಞಾನನಿವೃತ್ತಿಗಾಗಿಯೇ ಸಿದ್ಧ ವಾಗಿದ್ದರೂ ಅದು ತನ್ನ ಕಾರ್ಯಸಿದ್ಧಿಯನ್ನು ಪಡೆಯಲಿಲ್ಲವೆಂದಾದರೆ ಅದು ವಿಧಿಯನ್ನು ಬಯಸಿದಮೇಲೂ ಸಹ ಸ್ವಕಾರ್ಯಸಿದ್ಧಿಯನ್ನು ಹೊಂದಲಾರದು. (ಸ್ವತಃ ಇಲ್ಲದ ಗುಣವು ಬೇರೊಂದರ ಸಹಕಾರದಿಂದಲೂ ಬರಲಾರದು).

ತಸ್ಮಾತ್ ಕೂಟಸ್ಥವಿಜ್ಞಾನಂ ಪ್ರತ್ಯಾಖ್ಯಾತಾಖಿಲದ್ವಯಮ್ |
ಆನಂದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕುತಶ್ಚನ ||

೭೨೦. ಆದ್ದರಿಂದ ಕಿತ್ತೊಗೆಯಲ್ಪಟ್ಟ ಎಲ್ಲಾ ದ್ವೈತವುಳ್ಳ ಕೂಟಸ್ಥ ವಿಜ್ಞಾನವು ಬ್ರಹ್ಮವು; ಬ್ರಹ್ಮದ ಈ ಆನಂದಸ್ವರೂಪವನ್ನು ಬಲ್ಲವನು ಯಾವ ದಕ್ಕೂ ಭಯಪಡುವವನಾಗಿರುವದಿಲ್ಲ.

ಬ್ರಹ್ಮಣೋ ಬ್ರಾಹ್ಮಣಸ್ಯೇತಿ ಭೇದಶ್ಚಾತ್ರೌಪಚಾರಿಕಃ |
ರಾಹೋಃ ಶಿರೋವನ್ಮುಖ್ಯಸ್ತು ನೈವ ಸ್ಯಾನ್ನಿರ್ಗುಣತ್ವತಃ ||

೭೨೧. ಬ್ರಹ್ಮದ ಆನಂದವನ್ನು ಎಂದು ಹೇಳಿದ್ದರಿಂದ ಬ್ರಹ್ಮ, ಆನಂದ ಗಳು ಬೇರೆಬೇರೆಯೆಂದು ತಿಳಿಯಬಾರದು. ಎರಡೂ ಒಂದೇ. ಇಲ್ಲಿ ಭೇದವನ್ನು ಹೇಳಿರುವದು ಉಪಚಾರಮಾತ್ರವಾಗಿದೆ. ಏಕೆಂದರೆ ಬ್ರಹ್ಮವು ನಿರ್ಗುಣವಾದ್ದ ರಿಂದ ಮುಖ್ಯಾರ್ಥವು ( ಬ್ರಹ್ಮ, ಆನಂದಗಳು ಎರಡು ) ಎಂಬಿದು ಹೊಂದ ಲಾರದು. ಆದರೆ ರಾಹುವಿನ ಶಿರಸ್ಸು-ಎಂಬಲ್ಲಿ ಹೇಗೆ ರಾಹುವೇ ಶಿರಸ್ಸೋ ಶಿರಸ್ಸೆಂಬುದೇ ರಾಹುವೋ ಹಾಗೆಯೇ ಇಲ್ಲಿಯೂ ತಿಳಿಯಬೇಕು.

ಮಹಿಮಾ ಬ್ರಾಹ್ಮಣಸ್ಯೈಷ ಹಾನಿವೃದ್ಧಿವಿವರ್ಜಿತಃ |
ಸ್ವತಃ ಸಿದ್ಧೇರ್ವಿಜಾನಂಸ್ತಂ ನ ಬಿಭೇತಿ ಕುತಶ್ಚನ ||

೭೨೨. ಹಾನಿವೃದ್ಧಿಗಳಿಲ್ಲದ ಈ ಮಹಿಮೆಯು ಬ್ರಾಹ್ಮಣನದು-ಎಂಬಲ್ಲಿ ಹೇಳಿರುವಂತೆ (ಈ ಮಹಿಮೆಯು) ಸ್ವತಃ ಸಿದ್ಧವಾದುದೆಂದು ತಿಳಿದವನಾಗಿ ಏತರಿಂದಲೂ ಭಯಪಡುವದಿಲ್ಲ.

ವಿದ್ವಾನ್ ಸನ್ ನ ಬಿಭೇತೀತಿ ವಿದ್ಯಾಕಾಲಂ ಭವೇತ್ ಫಲಮ್ ।
ನ ತು ಸ್ವರ್ಗಾದಿವತ್ ಪ್ರಾಪ್ಯಂ ಭುಂಜಾನಸ್ತೃಪ್ಯತೀತಿವತ್ ॥

೭೨೩. ಅರಿತವನಾಗಿ ಭಯವನ್ನು ಹೊಂದುವದಿಲ್ಲ-ಎಂದು ಅರಿವಿನ ಸಮಕಾಲದಲ್ಲಿಯೇ ಫಲವನ್ನು ಹೇಳಲಾಗಿದೆ. ಭೋಜನ ಮಾಡುತ್ತಾ ತೃಪ್ತಿಯನ್ನು ಹೊಂದುತ್ತಾನೆ-ಎಂದಂತೆ ಇದನ್ನು ತಿಳಿಯಬೇಕು. ಆದರೆ ಸ್ವರ್ಗಾದಿಗಳಂತೆ ಈ ಜ್ಞಾನಫಲವು ಹೊಸದಾಗಿ ಹೊಂದತಕ್ಕದ್ದಲ್ಲ.

ಯತೋಽವಿದ್ಯಾತಿರೇಕೇಣ ಪ್ರತಿಬಂಧೋ ನ ವಿದ್ಯತೇ ।
ತನ್ನಾಶಾನಂತರಾಂ ಮುಕ್ತಿಂ ವಿದ್ವಾನಿತಿ ತತೋಽವದತ್ ॥

೭೨೪. ಏಕೆಂದರೆ ಅವಿದ್ಯೆಗಿಂತ ಬೇರೆಯಾಗಿ ಯಾವದೂ ಪ್ರತಿಬಂಧಕವು ಮುಕ್ತಿಗೆ ಇರುವದಿಲ್ಲ. ಆದ್ದರಿಂದ ಅವಿದ್ಯೆಯ ನಾಶಸಮಕಾಲದಲ್ಲಿಯೇ ಮುಕ್ತಿಯನ್ನು ವಿದ್ವಾನ್-ನ ಬಿಭೇತಿ ಎಂದು ವರ್ಣಿಸಲಾಗಿದೆ.

ಭಯಹೇತುರ್ದ್ವಯಂ ಯಸ್ಮಾತ್ ತಚ್ಚಾವಿದ್ಯಾಸಮುದ್ಭವಮ್ ।
ಪ್ಲುಷ್ಟಾಯಾಂ ವಿದ್ಯಯಾ ತಸ್ಯಾಂ ನ ಕುತಶ್ಚನ ಭೀರ್ಭವೇತ್ ॥

೭೨೫. ದ್ವೈತವೇ ಭಯಕ್ಕೆ ಕಾರಣವಾಗಿರುವದರಿಂದಲೂ ಅದು ಅವಿದ್ಯೆಯಿಂದುಂಟಾದದ್ದಾದ್ದರಿಂದಲೂ ವಿದ್ಯೆಯಿಂದ ಅವಿದ್ಯೆಯು ತೊಳೆದುಹಾಕಲ್ಪಡಲಾಗಿ ಎಂದೆಂದಿಗೂ ಎಲ್ಲಿಂದಲೂ ಭಯವಾಗಲಾರದು.

ಪರಮಾತ್ಮಧಿಯೈತಸ್ಮಿನ್ ಪ್ರತ್ಯಗಾತ್ಮನಿ ಕೇವಲೇ ।
ನಿರಸ್ತಾಯಾಮವಿದ್ಯಾಯಾಂ ಭಯಂ ನಾಸ್ತಿ ಕುತಶ್ಚನ ॥

೭೨೬. ಕೇವಲನಾದ ಈ ಪ್ರತ್ಯಗಾತ್ಮನಲ್ಲಿ ಪರಮಾತ್ಮಬುದ್ಧಿಯನ್ನು ಮಾಡುವದರಿಂದ ಅವಿದ್ಯೆಯು ನಾಶವಾಗಲು ಏತರಿಂದಲೂ ಎಲ್ಲಿಂದಲೂ ಭಯವಿಲ್ಲ.

ನಿರ್ಧೂತಪದವಾಕ್ಯಾರ್ಥಮಿತ್ಯೇವಂ ಪ್ರತಿಪತ್ತಯೇ ।
ಯತೋ ವಾಚೋ ನಿವರ್ತಂತ ಇತ್ಯೇವಂ ವಚನಂ ಶ್ರುತೇಃ ॥

೭೨೭. ಬ್ರಹ್ಮವು, ಪದ, ವಾಕ್ಯ, ಅರ್ಥಗಳನ್ನು ಕೊಡವಿಹಾಕಿ ಸ್ವತಃ ಸಿದ್ಧವಾಗಿ ಇದೆ-ಎಂಬ ಅರ್ಥದಲ್ಲಿ ಶ್ರುತಿಯ 'ಯತೋ ವಾಚೋ ನಿವರ್ತಂತೇ' ಎಂಬ ಮಾತು ಬಂದಿದೆ.

# ಉಪಕಾರಸ್ಮರಣೆ

**ಪತ್ರಿಕೆಗೆ ನೂತನ ಮಹಾಪೋಷಕರುಗಳು :** MPN. 1187. ರಾಧಾಕೃಷ್ಣ ಗುಪ್ತರು, ದಾವಣಗೆರೆ– ಈ ಮಹಾಶಯರು ೨೦೧ ರೂ.ಗಳನ್ನು ದಯಪಾಲಿಸಿ ಮಹಾಪೋಷಕರಾಗಿ ಪತ್ರಿಕೆಯನ್ನು ಪ್ರೋತ್ಸಾಹಿಸಿದ್ದಾರೆ. MPO. 558. ಶ್ರೀಮತಿ ಶಕುಂತಳಾ ನಾಗರಾಜ, ಬೆಂಗಳೂರು ; ಇವರು ಹೆಚ್ಚಿನ ಮಹಾಪೋಷಣ ದ್ರವ್ಯ ರೂ. ೧೦೦ನ್ನು ಸಲ್ಲಿಸಿರುತ್ತಾರೆ.

1990ನೆಯ ಸೆಪ್ಟೆಂಬರ್ ಮಾಹೆಯಲ್ಲಿ ಈ ಕೆಳಗೆ ಕಂಡಂತೆ ಸಹಾಯದ್ರವ್ಯವನ್ನು ಕೃತಜ್ಞತೆಯಿಂದ ಸ್ವೀಕರಿಸಲಾಗಿದೆ :

**ಗ್ರಂಥಪ್ರಕಟಣೆಗೆ :** (A) ಸಾಮಾನ್ಯ ; ಶ್ರೀಗಳಾದ : ಕೃಷ್ಣಶೆಟ್ಟರು, ಮೈಸೂರು ರೂ. ೭೫ ; ಕೆ. ವಿ. ಮಂಗಳಾಂಬ, ಬೆಂಗಳೂರು ರೂ. ೨೫ ; ಡಾ|| ಎಸ್. ನಾಗರಾಜ್, ಮೈಸೂರು ರೂ. ೩೦ ; ಎನ್. ಮಾಲತೀಶ್, ಬೆಂಗಳೂರು ರೂ. ೧೦೦–ಒಟ್ಟು ರೂ. ೨೩೦.

(B) **ಸೌರಭಗ್ರಂಥಕ್ಕೆ :** ಶ್ರೀ ಟಿ. ಶೇಷಾದ್ರಿಯವರು, ಬೆಂ. ರೂ. ೨೦೦ ; ಆರ್.ಹೆಚ್. ರಾಧಾಕೃಷ್ಣಗುಪ್ತರು, ದಾವಣಗೆರೆ ರೂ. ೧೦೦ ; ಟಿ.ಎನ್. ಪ್ರಕಾಶ್ ರವರು, ಬೆಂಗಳೂರು ರೂ. ೧೦೦–ಒಟ್ಟು ರೂ. ೪೦೦.

**ವಿದ್ಯಾರ್ಥಿನಿಧಿಗೆ :** ಡಿ.ಎಸ್. ಶೈಲಜ, ಬೆಂಗಳೂರು ರೂ. ೧೫.

**ಪೂಜಾಮಂದಿರನಿಧಿಗೆ :** ಯಾದಾಳಂ ವಂಶೀಕರು, ಬೆಂ. ರೂ. ೨೫.

**ಸಂನ್ಯಾಸಿಗಳ ಸತ್ಕಾರನಿಧಿಗೆ :** ವೆಂಕಟನಾರಾಯಣ, ಭೋಪಾಲ್ ರೂ.೭; ಎನ್.ಎಲ್. ರಾಮಚಂದ್ರ, ಬೆಂಗಳೂರು ರೂ. ೧೦ ; ಜಿ.ಕೆ. ಸುಬ್ಬಲಕ್ಷ್ಮಿ, ಹೊಳೆನರಸೀಪುರ ರೂ. ೨೦ ; ಕೆ.ವಿ. ಲಲಿತಾಂಬ, ಚಿಂತಾಮಣಿ ರೂ. ೧೦ ; ನಾಗರಾಜ ಶೆಟ್ಟರು, ಹೊಳೆನರಸೀಪುರ ರೂ. ೧೦–ಒಟ್ಟು ರೂ. ೫೭.

**ಗುರುಮಂದಿರನಿಧಿಗೆ :** ವೆಂಕಟಸುಬ್ಬಯ್ಯನವರು, ಹೊ.ನ.ಪುರ ರೂ. ೨೦.

**ವೇದಾಂತಸಪ್ತಾಹನಿಧಿಗೆ:** ಡಾ|| ಕೆ. ಅನಂತರಾಮು,ಮೈಸೂರು ರೂ. ೧೦೦.

**ವೇದಾಂತಸಪ್ತಾಹ ಮೂಲನಿಧಿಗೆ :** ನಿಖಿಲಾನಂದಗುಪ್ತರು, ಬೆಂಗಳೂರು ರೂ. ೩೦ ;

**ಅನುಷ್ಠಾನನಿಧಿಗೆ :** (ಶರನ್ನವರಾತ್ರಿ) ವಿಶಾಲಾಕ್ಷಮ್ಮ, ಹೊಳೆನರಸೀಪುರ ರೂ. ೧೦ ; ವಜ್ರಮ್ಮ ರೂ. ೧೫–ಒಟ್ಟು ರೂ. ೨೫.

ಮೇಲ್ಕಂಡ ಮಹಾಶಯರುಗಳಿಗೆಲ್ಲ ನಮ್ಮ ಅಭಿನಂದನೆಗಳು.

**ವಿಶೇಷ :** ಕಳೆದ ೫ನೆಯ ಸಂಪುಟಕ್ಕೆ ಚಂದಾದಾರರು, ಪೋಷಕರು, ಮಹಾಪೋಷಕರುಗಳನ್ನು ಒದಗಿಸಿಕೊಟ್ಟು ಅನೇಕರು ಸಹಾಯಮಾಡಿದ್ದಾರೆ. ಜಾಹಿರಾತುಗಳನ್ನು ನೀಡಿಯೂ ಕೆಲವರು ಸಹಕರಿಸಿದ್ದಾರೆ. ಲೇಖನಗಳನ್ನು ಒದಗಿಸುವದು, ಸಲಹೆಗಳನ್ನು ನೀಡುವದು– ಮುಂತಾದ ರೀತಿಯಿಂದಲೂ ಕೆಲವರಿಂದ ನಾವು ಉಪಕೃತರಾಗಿರುತ್ತೇವೆ. ಈ ಮಹಾಶಯರುಗಳೆಲ್ಲರಿಗೂ ನಾವು ಈ ಮೂಲಕ ಕೃತಜ್ಞತೆಗಳನ್ನು ಸಮರ್ಪಿಸುತ್ತೇವೆ. ಮುಂದೆಯೂ ಇವರುಗಳ ಸಹಾಯವನ್ನು ಕೋರಿದ್ದೇವೆ.

———

ADHYATMA Prakasha

Regd. No.
KRN-I-5

Registered with Registrar of News-papers
for India under No. R. N. 13244/57

# ಕೇಳಿರಿ

ಶಾಂತಿ-ಎಂಬುದು ಈಗ ಹಗಲುಗನಸಾಗಿದೆ. ಮಾನವನು ವಿಜ್ಞಾನದ ಬಲ ದಿಂದ ಭೋಗಸಾಮಗ್ರಿಗಳನ್ನು ರಾಶಿಹಾಕಿಕೊಂಡಿದ್ದರೂ ಭಯ, ಅಶಾಂತಿಗಳು ಅವನನ್ನು ಪೀಡಿಸುತ್ತಲೇ ಇವೆ. ಭೋಗ್ಯಪದಾರ್ಥಗಳನ್ನು ನಿರಾಳವಾಗಿ ಅನುಭವಿಸಲು ಕೂಡ ಈಗ ಸಾಧ್ಯವಾಗುತ್ತಿಲ್ಲ. ಇನ್ನು ಮಾನಸಿಕಸಮಾಧಾನವೆಲ್ಲಿಂದ ಬಂದೀತು ? ಆದ್ದರಿಂದ ನಾವು ಕೂಡಲೆ ಪರಮಾತ್ಮನನ್ನರಿಯುವ ಪ್ರಯತ್ನಮಾಡಬೇಕು. ನಮ್ಮ ಪ್ರಯತ್ನವು ಪೂರ್ಣಗೊಂಡಾಗ ನಾವು ಸುಖಿಗಳಾಗುವೆವು-ಎಂದು ಉಪನಿಷತ್ತುಗಳಲ್ಲಿ ತಿಳಿಸಿದೆ.

To,

Sri



M.P.O. - 414

Sri.J.Srinivasa Murthy
No.18 - II Cross - Kodandaram-
puram,
P.O. - Bangalore - 3.

Edited Printed & Published by H.S. Lakshminarasimha Murthy
as Secretary for The Adhyatma Prakasha Karyalaya,
at The Adhyatma Prakasha Press, Holenarsipur-573211
6—11—1990